| ಕ್ರಸಂ | ಬೆಂಗಳೂರು ದಕ್ಷಿಣ ತಾಲ್ಲೂಕು ಪಂಚಾಯಿತಿಯ ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಪ್ರಾದೇಶಿಕ ಚುನಾವಣಾ ಕ್ಷೇತ್ರದ ವ್ಯಾಪ್ತಿ |
|---|---|---|
| 1 | 2 | 3 |
| 3 | ಚೋಳನಾಯಕನಹಳ್ಳಿ | **ಚೋಳನಾಯಕನಹಳ್ಳಿ,** ಎ.ಕೆ.ಕಾಲೋನಿ, ಗಂಗಪ್ಪನಹಳ್ಳಿ, ಹೊಸಪಾಳ್ಯ ಮತ್ತುಬಂಡೆ, ಚೋಳನಾಯಕನಹಳ್ಳಿಬಂಡೆ, ನಾಯ್ಡುಬಂಡೆ, ಕಿಶೋರ್‌ಬಂಡೆ, ನಾಗರಾಜ್‌ಬಂಡೆ, ಶೇಷಗಿರಿಬಂಡೆ, ಮಾರೇನಹಳ್ಳಿ, ನಾಗನಹಳ್ಳಿ, ಚನ್ನಮಾರನಪಾಳ್ಯ, ತಿಪ್ಪಗೊಂಡನಹಳ್ಳಿ, ಆಚೆಬೈಲು, ಕೂಟ್ಲು, ತವಕದಹಳ್ಳಿ(ಬೇ), ಕೆಂಪಗೊಂಡನಹಳ್ಳಿ, ಯಲ್ಲಪ್ಪನಪಾಳ್ಯ, ವರ್ತೂರು, ವರ್ತೂರುನರಸಿಂಹಪುರ, ಗಂಗೇನಹಳ್ಳಿ, ಅರ್ಕಾವತಿಎಸ್ಟೇಟ್, ಮಡಿಚೇನಪಾಳ್ಯ, ಲಕ್ಷ್ಮೀಪುರ, ಹೊಸಪಾಳ್ಯ, ಬೈಚಗುಪ್ಪೆ, ಜನತಾಕಾಲೋನಿ,ಗುರವಗೋವಿಪಾಳ್ಯ(ವಡ್ಡರದೊಡ್ಡಿ), ದೇವಮಾಚೋಹಳ್ಳಿ, ಕರೆಕಲ್ಲುಪಾಳ್ಯ, ಜೋಗೇರಹಳ್ಳಿ, ಪೆದ್ದನಪಾಳ್ಯ. ಗಾಣಕಲ್ಲು, ಡಿ.ನಾರಾಯಣಪುರ, ಬಂಡೆಪಾಳ್ಯ. |
| 4 | ಚಿಕ್ಕನಹಳ್ಳಿ | **ಚಿಕ್ಕನಹಳ್ಳಿ,** ಶಾಂತಿನಗರ, ಬಸಮ್ಮನಹಳ್ಳಿ, ಕುರುಬರಪಾಳ್ಯ, ಮಾರಯ್ಯನಪಾಳ್ಯ, ವಾಡಹಳ್ಳಿ, ಗುಂಡಪ್ಪನಪಾಳ್ಯ, ದೊಡ್ಡೇರಿ, ಜಂಗಮಮಠ, ಜನತಾಕಾಲೋನಿ, ರಾಮನಾಯಕನತಾಂಡ್ಯ, ಕರಿಯಪ್ಪನಪಾಳ್ಯ, ಚಿಕ್ಕಮಾರಪ್ಪನಪಾಳ್ಯ, ಚಿಕ್ಕೇಗೌಡನಪಾಳ್ಯ, ಗುರುವಬೋವಿಪಾಳ್ಯ, ಬಂಡೆಗುಡಿಸಲು (ಚನ್ನಪ್ಪನಪಾಳ್ಯ), ಮಾಯಸಂದ್ರ, ಹುಲುವೇನಹಳ್ಳಿ, ಕಲ್ಲುಪಾಳ್ಯ, ಹುಣ್ಣಿಗೆರೆ, ಅರಳಿಮರದಪಾಳ್ಯ, ಅಂಕಯ್ಯನಪಾಳ್ಯ, ಮಾದಾಪಟ್ಟಣ, ಸೂಲಿವಾರ, ಕುರುಬರಪಾಳ್ಯ, ಗೊಲ್ಲಹಳ್ಳಿ, ಸೂಲಿವಾರರಾಂಪುರ, ಬ್ಯಾಲಾಳು, ದೊಣ್ಣೇನಹಳ್ಳಿ, ಉದ್ದಂಡಹಳ್ಳಿ, ಅಜ್ಜನಹಳ್ಳಿ, ಮುದ್ದನಪಾಳ್ಯ, ಹೊಸಪಾಳ್ಯ, ಕಾಳಯ್ಯನಪಾಳ್ಯ, ಚಂದ್ರಪ್ಪಸರ್ಕಲ್, ಅಜ್ಜನಹಳ್ಳಿ ಸ.ನಂ.58 ರ ಮನೆಗಳು, ಕಾಡುಸಿದ್ದನಪಾಳ್ಯ, ಆಲಮ್ಮನಪಾಳ್ಯ, ಹರಿಜನಕಾಲೋನಿ, ಮರಿವಡೇರಪಾಳ್ಯ, ಪ್ರಸನ್ನಚಾರಿಪಾಳ್ಯ. |
| 5 | ಕುಂಬಳಗೋಡು | **ಕುಂಬಳಗೋಡು,** ಗೇರುಪಾಳ್ಯ, ಕಣಿಮಿಣಕೆ, ಕಣಿಮಿಣಕೆಕಾಲೋನಿ, ಹೊಸಪಾಳ್ಯ, ಕಂಬೀಪುರ, ಕಾರುಬೆಲೆ, ಅಂಚೆಪಾಳ್ಯ, ಸ್ನೇಹಜ್ಯೋತಿ, ಆರ್ಶೀವಾನಂ. |
| 6 | ರಾಮೋಹಳ್ಳಿ | **ರಾಮೋಹಳ್ಳಿ,** ಕೋಡಿಪಾಳ್ಯ, ವಿನಾಯಕನಗರ, ಮಾಳಿಗೊಂಡನಹಳ್ಳಿ, ಮಾರಗೊಂಡನಹಳ್ಳಿ, ಮಾರಗೊಂಡನಹಳ್ಳಿಜನತಕಾಲೋನಿ, ಎಂ.ಕೃಷ್ಣಸಾಗರ, ಗುಲಗಂಜನಹಳ್ಳಿ, ಎಂ.ಬೋಳರಬಂಡೆ, ಬೀಮನಕುಪ್ಪೆ, ಬೆಣಚಕಲ್ಲುಗುಟ್ಟೆ, ಚಳ್ಳಘಟ್ಟ, ಬೆಟ್ಟನಪಾಳ್ಯ, ಹುಣಸೇಮರದಪಾಳ್ಯ, ಚಳ್ಳಘಟ್ಟಕಾಲೋನಿ.<br><br>**ಸೂಲಿಕೆರೆ,** ಸೂಲಿಕೆರೆಕಾಲೋನಿ, ಸೂಲಿಕೆರೆಪಾಳ್ಯ, ಸೂಲಿಕೆರೆಬಂಗ್ಲೆ, ಸೂಲಿಕೆರೆಕಾಡು, ಕೊಮ್ಮಘಟ್ಟ, ಹಳೆಬೈರೋಹಳ್ಳಿ, ಹೊಸಬೈರೋಹಳ್ಳಿ, ಕೆ.ಕೃಷ್ಣಸಾಗರ, ಕೆಂಚನಪುರ, ಕೆಂಚನಪುರಎ.ಕೆ.ಕಾಲೋನಿ, ರಾಮಸಂದ್ರ, ದನಾಯಕನಹಳ್ಳಿ, ಚಿಕ್ಕನಹಳ್ಳಿ, ಚಿಕ್ಕಬಸ್ತಿ, ದೊಡ್ಡಬಸ್ತಿ. |
| 7 | ಕೆ.ಗೊಲ್ಲಹಳ್ಳಿ | **ಕೆ.ಗೊಲ್ಲಹಳ್ಳಿ,** ಕೆಂಚನಪಾಳ್ಯ, ತಗಚಕುಪ್ಪೆ, ರಾಮಯ್ಯನಪಾಳ್ಯ, ಗುಡಿಮಾವು, ಕುಳ್ಳೇಗೌಡನಪಾಳ್ಯ, ಶ್ರೀನಿವಾಸಪುರ, ದೇವಗೆರೆ, ದೇವಗೆರೆಎ.ಕೆ.ಕಾಲೋನಿ, ನಿತ್ಯಾನಂದಮಠ, ಗಂಗಸಂದ್ರ, ಗವಿಯಾನಪಾಳ್ಯ, ಲಕ್ಷ್ಮೀಪುರ, ಗೋಣಿಪುರ, ಚಿನ್ನಕುರ್ಚಿ, ವಸಂತನಹಳ್ಳಿ(ಬೇ), ತಿಟ್ಟಹಳ್ಳಿ, ತಿಪ್ಪೂರು, ಲಿಂಗಾಪುರ, ಸೀಗೇಹಳ್ಳಿ, ಬಂಡಯ್ಯನಪಾಳ್ಯ, ಹಂಪಾಪುರ, ಹಂಪಾಪುರ ಎ.ಕೆ.ಕಾಲೋನಿ. |
| 8 | ಅಗರ | **ಅಗರ,** ಹೊಸಪಾಳ್ಯ, ಆನೇಪಾಳ್ಯ, ಕಾಮಯ್ಯನಪಾಳ್ಯ, ದೊಡ್ಡಿಪಾಳ್ಯ, ಸಿದ್ದನಪಾಳ್ಯ, ಅಗರಕಾಲೋನಿ, ಬಂಜಾರುಪಾಳ್ಯ, ತಿಮ್ಮೇಗೌಡನಪಾಳ್ಯ, ಕುಂಬೇಗೌಡನಪಾಳ್ಯ, ಬೈರಸಂದ್ರ, ಬಸಪ್ಪನಪಾಳ್ಯ, ದೊಡ್ಡತಾತಗುಣಿ, ಚಿಕ್ಕತಾತಗುಣಿ, ವ್ಯಾಲಿಸ್ಕೂಲ್, ಬಿ.ಡಬ್ಲ್ಯೂ.ಎಸ್.ಎಸ್.ಬಿ.ಕಾಲೋನಿ, ಗಡ್ಡೆಚನ್ನಪಾಳ್ಯ, ಬಿ.ಎಂ.ಕಾವಲ್, ಲಕ್ಷ್ಮೀಪುರ, ನಾರಾಯಣಗುರುಕುಲ, ವಡೇರಹಳ್ಳಿ, ಸಾಲುದೊಡ್ಡಿ, ತಾತಗುಣಿಎಸ್ಟೇಟ್, ಮಲ್ಲಸಂದ್ರ(ಬೇ), ಯು,ಎಂ.ಕಾವಲ್(ಬೇ). **ಹೆಚ್.ಗೊಲ್ಲಹಳ್ಳಿ,**ಕಾಟನಾಯಕನಪುರ, ರಾಚನಮಡು, ನಾಗೇಗೌಡನಪಾಳ್ಯ, ಮಿಟಕಲ್‌ಪಾಳ್ಯ, ಚಿಕ್ಕೇಗೌಡನಪಾಳ್ಯ, ದೊಡ್ಡಬೆಲೆ, ದೊಡ್ಡಬೆಲೆಕಾಲೋನಿ, ವೆಂಕಟಾಪುರ. |
| 9 | ಕಗ್ಗಲೀಪುರ | **ಕಗ್ಗಲೀಪುರ,** ಸಾಲುಹುಣಸೆ, ಎ.ಕೆ.ಕಾಲೋನಿ, ದಿಣ್ಣೆಪಾಳ್ಯ, ಉದಿಪಾಳ್ಯ, ಪಟ್ಟರೆಡ್ಡಿಪಾಳ್ಯ, ಗಾಂಧಿನಗರ, ಕಂತಯ್ಯನಪಾಳ್ಯ, ಉತ್ತರಿ, ಬಾದೆಕಟ್ಟೆ, ಓಬೀಚೂಡಹಳ್ಳಿ.<br><br>**ತರಳು,** ತರಳುಎಸ್ಟೇಟ್, ಗೋಪಾಲಪುರ, ಗುಟ್ಟೆಪಾಳ್ಯ, ಗುಳಿಕಮಲೆ, ವಾಸುದೇವಪುರ, ನಲ್ಲಕ್ಕದೊಡ್ಡಿ, ಕುಂಚಿಗೆರೆಪಾಳ್ಯ, ತಟಗುಪ್ಪೆ, ಅಳಕಬೆಳಲು(ಬೇ), |

| ಕ್ರ.ಸಂ | ಬೆಂಗಳೂರು ದಕ್ಷಿಣ ತಾಲ್ಲೂಕು ಪಂಚಾಯಿತಿಯ ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಪ್ರಾದೇಶಿಕ ಚುನಾವಣಾ ಕ್ಷೇತ್ರದ ವ್ಯಾಪ್ತಿ |
|---|---|---|
| 1 | 2 | 3 |
| 10 | ಸೋಮನಹಳ್ಳಿ | **ಸೋಮನಹಳ್ಳಿ,** ಸುಂಕದಕಟ್ಟೆ(ಬೇ), ರಾಮೇಶ್ವರನಗರ, ಎ.ಪಿ.ಎಸ್.ವಿದ್ಯಾರಸ್ತೆ, ರಾಯರದೊಡ್ಡಿ, ನೆಲಗುಳಿ, ಹೊಸದೊಡ್ಡಿ, ಸಾದನಪಾಳ್ಯ, ಕೆ.ಚೂಡಹಳ್ಳಿ, ಚಿಕ್ಕನಾಗಿಪಾಳ್ಯ, ನೌಕಲ್‌ಪಾಳ್ಯ, ಗುಡಿಪಾಳ್ಯ, ನಾಗನಾಯಕನಹಳ್ಳಿ, ಮಲ್ಲಿಪಾಳ್ಯ, ನಾಗನಾಯಕನಹಳ್ಳಿಬಂಡೆ ಮತ್ತು ಎಸ್ಟೇಟ್, ನೆಟ್ಟಿಗೆರೆ, ಬೋಳಾರೆ, ವೀರಸಂದ್ರ, ರಾವುಗೊಡ್ಲು, ತಿಟ್ಟಹಳ್ಳಿ, ವಡ್ಡರಪಾಳ್ಯ, ಮುಕ್ಕೋಡ್ಲು, ಗಿರಿಗೌಡನಪಾಳ್ಯ, ಗಾಡಿಪಾಳ್ಯತೋಪುರು. |
| 11 | ದೊಡ್ಡತೋಗೂರು | **ದೊಡ್ಡತೋಗೂರು,** ಬೆಟ್ಟದಾಸನಪುರ, ವಿಟ್ಟಸಂದ್ರ, ವಡ್ಡರಪಾಳ್ಯ, ಬೋವಿಗುಟ್ಟೆಬಂಡೆ, ಮೈಲಸಂದ್ರ, ಹೊಮ್ಮದೇವನಹಳ್ಳಿ. |
| 12 | ಕೋನಪ್ಪನ ಅಗ್ರಹಾರ | **ಕೋನಪ್ಪನಅಗ್ರಹಾರ,** ಗೋವಿಂದಶೆಟ್ಟಿಪಾಳ್ಯ, ದೊಡ್ಡನಾಗಮಂಗಲ. |

ಆದೇಶಾನುಸಾರ
**ಸಿ.ಆರ್.ರೇವಣ್ಣ**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ

# ವಿಶೇಷ ಪತ್ರಿಕೆ

| ಭಾಗ – *III* | ಬೆಂಗಳೂರು, ಸೋಮವಾರ, ನವೆಂಬರ್ ೧೫, ೨೦೧೦ (ಕಾರ್ತೀಕ ೨೪, ಶಕ ವರ್ಷ ೧೯೩೨) | ನಂ. ೧೫೫೧ |
|---|---|---|

## ರಾಜ್ಯ ಚುನಾವಣಾ ಆಯೋಗ, ಕರ್ನಾಟಕ

**ಕೆ.ಎಸ್.ಸಿ.ಎಂ.ಎಫ್. ಮಂಡಳಿ ಕಟ್ಟಡ (ಹಿಂಭಾಗ) ನಂ. 8, 1ನೇ ಮಹಡಿ ಕನ್ನಿಂಗ್ ಹ್ಯಾಂ ರಸ್ತೆ, ಬೆಂಗಳೂರು–52**

**ಅಧಿಸೂಚನೆ**

**ಸಂಖ್ಯೆ: ರಾಚುಆ: 221 :ಟಿಜಿಡ್‌ಪಿ:2010, ದಿನಾಂಕ: 15-11-2010**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 (1993ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 162ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹಾಗೂ ಈ ಹಿಂದೆ ಈ ಕುರಿತು ಹೊರಡಿಸಿರುವ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ, ಕರ್ನಾಟಕ ರಾಜ್ಯ ಚುನಾವಣಾ ಆಯೋಗವು ಈ ಕೆಳಗಿನ ಕೋಷ್ಟಕದ 2ನೇ ಅಂಕಣದಲ್ಲಿ ನಮೂದಿಸಿದ **ಬೆಂಗಳೂರು ನಗರ ಜಿಲ್ಲಾ ಪಂಚಾಯಿತಿಯ** ಪ್ರಾದೇಶಿಕ ಚುನಾವಣಾ ಕ್ಷೇತ್ರದ ಸ್ಥಾನವನ್ನು ಸದರಿ ಕೋಷ್ಟಕದ 3ನೇ ಅಂಕಣದಲ್ಲಿ ನಮೂದಿಸಿದ ಪ್ರವರ್ಗಕ್ಕೆ ಮೀಸಲಾಗಿದೆಯೆಂದು ನಿರ್ಧರಿಸಿದೆ. ಮೀಸಲಿಟ್ಟಿರದ ಸ್ಥಾನವನ್ನು ಸಹ (3)ನೇ ಅಂಕಣದಲ್ಲಿ ನಮೂದಿಸಿದೆ.

**ಕೋಷ್ಟಕ**

| ಅನುಕ್ರಮ ಸಂಖ್ಯೆ | ಪ್ರಾದೇಶಿಕ ಚುನಾವಣಾಕ್ಷೇತ್ರದ ಹೆಸರು | ಸ್ಥಾನಗಳನ್ನು ಮೀಸಲಿರಿಸಿದ ಪ್ರವರ್ಗ ಹಾಗೂ ಮೀಸಲಿಟ್ಟಿರದ ಸ್ಥಾನಗಳು |
|---|---|---|
| 1 | 2 | 3 |
| 1. | ಮಾಚೋಹಳ್ಳಿ | ಹಿಂದುಳಿದ ಅ ವರ್ಗ ಮಹಿಳೆ |
| 2. | ದಾಸನಪುರ | ಸಾಮಾನ್ಯ |
| 3. | ಮಾದಾವರ | ಹಿಂದುಳಿದ ಅ ವರ್ಗ ಮಹಿಳೆ |
| 4. | ಗೋಪಾಲಪುರ | ಸಾಮಾನ್ಯ |
| 5. | ಸೋಮಶೆಟ್ಟಿಹಳ್ಳಿ | ಸಾಮಾನ್ಯ ಮಹಿಳೆ |
| 6. | ಹೆಸರಘಟ್ಟ | ಸಾಮಾನ್ಯ |
| 7. | ಸೊಣ್ಣೇನಹಳ್ಳಿ | ಅನುಸೂಚಿತ ಜಾತಿ ಮಹಿಳೆ |
| 8. | ಸಿಂಗನಾಯಕನಹಳ್ಳಿ | ಸಾಮಾನ್ಯ ಮಹಿಳೆ |

| ಅನುಕ್ರಮ ಸಂಖ್ಯೆ | ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಸ್ಥಾನಗಳನ್ನು ಮೀಸಲಿರಿಸಿದ ಪ್ರವರ್ಗ ಹಾಗೂ ಮೀಸಲಿಟ್ಟಿರದ ಸ್ಥಾನಗಳು |
|---|---|---|
| 1 | 2 | 3 |
| 9. | ಬೆಟ್ಟಹಲಸೂರು | ಅನುಸೂಚಿತ ಜಾತಿ |
| 10. | ಬಾಗಲೂರು | ಅನುಸೂಚಿತ ಪಂಗಡ ಮಹಿಳೆ |
| 11. | ಹುಣಸಮಾರನಹಳ್ಳಿ | ಸಾಮಾನ್ಯ |
| 12. | ಬಿದರಹಳ್ಳಿ | ಅನುಸೂಚಿತ ಜಾತಿ ಮಹಿಳೆ |
| 13. | ಮಂಡೂರು | ಅನುಸೂಚಿತ ಜಾತಿ |
| 14. | ಆವಲಹಳ್ಳಿ | ಹಿಂದುಳಿದ ಅ ವರ್ಗ |
| 15. | ತಾವರೆಕೆರೆ | ಸಾಮಾನ್ಯ ಮಹಿಳೆ |
| 16. | ಚೋಳನಾಯಕನಹಳ್ಳಿ | ಸಾಮಾನ್ಯ |
| 17. | ಕುಂಬಳಗೋಡು | ಸಾಮಾನ್ಯ ಮಹಿಳೆ |
| 18. | ಅಗರ | ಹಿಂದುಳಿದ ಅ ವರ್ಗ |
| 19. | ಕಗ್ಗಲೀಪುರ | ಅನುಸೂಚಿತ ಜಾತಿ ಮಹಿಳೆ |
| 20. | ಕೋನಪ್ಪನಅಗ್ರಹಾರ | ಅನುಸೂಚಿತ ಜಾತಿ |
| 21. | ಸರ್ಜಾಪುರ | ಅನುಸೂಚಿತ ಜಾತಿ ಮಹಿಳೆ |
| 22. | ದೊಮ್ಮಸಂದ್ರ | ಸಾಮಾನ್ಯ |
| 23. | ಹಂದೇನಹಳ್ಳಿ | ಅನುಸೂಚಿತ ಜಾತಿ ಮಹಿಳೆ |
| 24. | ಬೊಮ್ಮಸಂದ್ರ | ಸಾಮಾನ್ಯ ಮಹಿಳೆ |
| 25. | ನೆರಳೂರು | ಸಾಮಾನ್ಯ ಮಹಿಳೆ |
| 26. | ಹೆಬ್ಬಗೋಡಿ | ಸಾಮಾನ್ಯ ಮಹಿಳೆ |
| 27. | ಅತ್ತಿಬೆಲೆ | ಸಾಮಾನ್ಯ |
| 28. | ಸಮಂದೂರು | ಸಾಮಾನ್ಯ ಮಹಿಳೆ |
| 29. | ಮರಸೂರು | ಸಾಮಾನ್ಯ ಮಹಿಳೆ |
| 30. | ಇಂಡ್ಲವಾಡಿ | ಹಿಂದುಳಿದ ಅ ವರ್ಗ |
| 31. | ಹುಲಿಮಂಗಲ | ಅನುಸೂಚಿತ ಜಾತಿ |
| 32. | ಜಿಗಣಿ | ಹಿಂದುಳಿದ ಅ ವರ್ಗ ಮಹಿಳೆ |
| 33. | ಬನ್ನೇರುಘಟ್ಟ | ಸಾಮಾನ್ಯ |
| 34. | ಹಾರಗದ್ದೆ | ಹಿಂದುಳಿದ ಬ ವರ್ಗ ಮಹಿಳೆ |

ಆದೇಶಾನುಸಾರ
**ಸಿ.ಆರ್.ರೇವಣ್ಣ**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ

# ವಿಶೇಷ ಪತ್ರಿಕೆ

| ಭಾಗ – *III* | ಬೆಂಗಳೂರು, ಸೋಮವಾರ, ನವೆಂಬರ್ ೧೫, ೨೦೧೦ (ಕಾರ್ತೀಕ ೨೪, ಶಕ ವರ್ಷ ೧೯೩೨) | ನಂ. ೧೫೫೨ |
|---|---|---|

**ರಾಜ್ಯ ಚುನಾವಣಾ ಆಯೋಗ, ಕರ್ನಾಟಕ**

**ಕೆ.ಎಸ್.ಸಿ.ಎಂ.ಎಫ್. ಮಂಡಳಿ ಕಟ್ಟಡ (ಹಿಂಭಾಗ) ನಂ. 8, 1ನೇ ಮಹಡಿ ಕನ್ನಿಂಗ್ ಹ್ಯಾಂ ರಸ್ತೆ, ಬೆಂಗಳೂರು–52**

**ಅಧಿಸೂಚನೆ**

**ಸಂಖ್ಯೆ: ರಾಚುಆ: 45 :ಟಿಜಡ್‌ಪಿ:2010, ದಿನಾಂಕ: 15-11-2010**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ (1993ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 123ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹಾಗೂ ಈ ಹಿಂದೆ ಈ ಕುರಿತು ಹೊರಡಿಸಿರುವ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ, ಕರ್ನಾಟಕ ರಾಜ್ಯ ಚುನಾವಣಾ ಆಯೋಗವು **ಬೆಂಗಳೂರು ನಗರ ಜಿಲ್ಲೆಯ ಬೆಂಗಳೂರು ಉತ್ತರ ತಾಲ್ಲೂಕು ಪಂಚಾಯಿತಿಯ** ವ್ಯಾಪ್ತಿಯಲ್ಲಿರುವ ಈ ಕೆಳಗಿನ ಕೋಷ್ಟಕದ 2ನೇ ಅಂಕಣದಲ್ಲಿ ನಮೂದಿಸಿದ ತಾಲ್ಲೂಕು ಪಂಚಾಯತಿಯ ಪ್ರಾದೇಶಿಕ ಚುನಾವಣಾಕ್ಷೇತ್ರದ ಸ್ಥಾನವನ್ನು ಸದರಿಕೋಷ್ಟಕದ 3ನೇ ಅಂಕಣದಲ್ಲಿ ನಮೂದಿಸಿದ ಪ್ರವರ್ಗಕ್ಕೆ ಮೀಸಲಾಗಿದೆಯೆಂದು ನಿರ್ಧರಿಸಿದೆ. ಮೀಸಲಿಟ್ಟಿರದ ಸ್ಥಾನವನ್ನು ಸಹ (3)ನೇ ಅಂಕಣದಲ್ಲಿ ನಮೂದಿಸಿದೆ.

**ಕೋಷ್ಟಕ**

| ಅನುಕ್ರಮ ಸಂಖ್ಯೆ | ಪ್ರಾದೇಶಿಕ ಚುನಾವಣಾಕ್ಷೇತ್ರದ ಹೆಸರು | ಸ್ಥಾನಗಳನ್ನು ಮೀಸಲಿರಿಸಿದ ಪ್ರವರ್ಗ ಹಾಗೂ ಮೀಸಲಿಟ್ಟಿರದ ಸ್ಥಾನಗಳು |
|---|---|---|
| 1 | 2 | 3 |
| 1. | ಕೊಡಿಗೇಹಳ್ಳಿ | ಸಾಮಾನ್ಯ ಮಹಿಳೆ |
| 2. | ಮಾಚೋಹಳ್ಳಿ | ಅನುಸೂಚಿತ ಜಾತಿ ಮಹಿಳೆ |
| 3. | ದಾಸನಪುರ | ಹಿಂದುಳಿದ ಬ ವರ್ಗ ಮಹಿಳೆ |
| 4. | ಸೊಂಡೇಕೊಪ್ಪ | ಸಾಮಾನ್ಯ |
| 5. | ಮಾದಾವರ | ಹಿಂದುಳಿದ ಅ ವರ್ಗ ಮಹಿಳೆ |
| 6. | ಮಾದನಾಯಕನಹಳ್ಳಿ | ಹಿಂದುಳಿದ ಅ ವರ್ಗ ಮಹಿಳೆ |
| 7. | ಗೋಪಾಲಪುರ | ಸಾಮಾನ್ಯ ಮಹಿಳೆ |
| 8. | ಆಲೂರು | ಸಾಮಾನ್ಯ |
| 9. | ಸೋಮಶೆಟ್ಟಿಹಳ್ಳಿ | ಸಾಮಾನ್ಯ ಮಹಿಳೆ |
| 10. | ಕಸಘಟ್ಟಪುರ | ಸಾಮಾನ್ಯ |
| 11. | ಹೆಸರಘಟ್ಟ | ಸಾಮಾನ್ಯ ಮಹಿಳೆ |
| 12. | ಹುರುಳಿಚಿಕ್ಕನಹಳ್ಳಿ | ಸಾಮಾನ್ಯ |
| 13. | ಸೊಣ್ಣೇನಹಳ್ಳಿ | ಅನುಸೂಚಿತ ಜಾತಿ ಮಹಿಳೆ |
| 14. | ಶಿವಕೋಟೆ | ಸಾಮಾನ್ಯ |
| 15. | ಸಿಂಗನಾಯಕನಹಳ್ಳಿ | ಹಿಂದುಳಿದ ಅ ವರ್ಗ |
| 16. | ರಾಜಾನುಕುಂಟೆ | ಸಾಮಾನ್ಯ ಮಹಿಳೆ |
| 17. | ಬೆಟ್ಟಹಲಸೂರು | ಸಾಮಾನ್ಯ ಮಹಿಳೆ |
| 18. | ಬಂಡಿಕೊಡಿಗೆಹಳ್ಳಿ | ಅನುಸೂಚಿತ ಜಾತಿ |
| 19. | ಬಾಗಲೂರು | ಅನುಸೂಚಿತ ಜಾತಿ |
| 20. | ಚಿಕ್ಕಜಾಲ | ಅನುಸೂಚಿತ ಪಂಗಡ (ಮಹಿಳೆ) |
| 21. | ಹುಣಸಮಾರನಹಳ್ಳಿ | ಹಿಂದುಳಿದ ಅ ವರ್ಗ |
| 22. | ಮಾರೇನಹಳ್ಳಿ | ಅನುಸೂಚಿತ ಜಾತಿ ಮಹಿಳೆ |

ಆದೇಶಾನುಸಾರ
**ಸಿ.ಆರ್.ರೇವಣ್ಣ**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ

# ವಿಶೇಷ ಪತ್ರಿಕೆ

ಭಾಗ – ***III*** | **ಬೆಂಗಳೂರು, ಸೋಮವಾರ, ನವೆಂಬರ್ ೧೫, ೨೦೧೦ (ಕಾರ್ತೀಕ ೨೪, ಶಕ ವರ್ಷ ೧೯೩೨)** | ನಂ. ೧೫೫೩

**ರಾಜ್ಯ ಚುನಾವಣಾ ಆಯೋಗ, ಕರ್ನಾಟಕ**

**ಕೆ.ಎಸ್.ಸಿ.ಎಂ.ಎಫ್. ಮಂಡಳಿ ಕಟ್ಟಡ (ಹಿಂಭಾಗ) ನಂ. 8, 1ನೇ ಮಹಡಿ ಕನ್ನಿಂಗ್ ಹ್ಯಾಂ ರಸ್ತೆ, ಬೆಂಗಳೂರು–52**

**ಅಧಿಸೂಚನೆ**

**ಸಂಖ್ಯೆ: ರಾಚುಆ: 46 :ಟಿಜಿಡಬ್‌ಪಿ:2010, ದಿನಾಂಕ: 15-11-2010**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ (1993ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 123 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹಾಗೂ ಈ ಹಿಂದೆ ಈ ಕುರಿತು ಹೊರಡಿಸಿರುವ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ, ಕರ್ನಾಟಕ ರಾಜ್ಯ ಚುನಾವಣಾ ಆಯೋಗವು **ಬೆಂಗಳೂರು ನಗರ ಜಿಲ್ಲೆಯ ಬೆಂಗಳೂರು ದಕ್ಷಿಣ ತಾಲ್ಲೂಕು ಪಂಚಾಯಿತಿಯ** ವ್ಯಾಪ್ತಿಯಲ್ಲಿರುವ ಈ ಕೆಳಗಿನ ಕೋಷ್ಟಕದ 2ನೇ ಅಂಕಣದಲ್ಲಿ ನಮೂದಿಸಿದ ತಾಲ್ಲೂಕು ಪಂಚಾಯತಿಯ ಪ್ರಾದೇಶಿಕ ಚುನಾವಣಾ ಕ್ಷೇತ್ರದ ಸ್ಥಾನವನ್ನು ಸದರಿ ಕೋಷ್ಟಕದ 3ನೇ ಅಂಕಣದಲ್ಲಿ ನಮೂದಿಸಿದ ಪ್ರವರ್ಗಕ್ಕೆ ಮೀಸಲಾಗಿದೆಯೆಂದು ನಿರ್ಧರಿಸಿದೆ. ಮೀಸಲಿಟ್ಟಿರದ ಸ್ಥಾನವನ್ನು ಸಹ (3)ನೇ ಅಂಕಣದಲ್ಲಿ ನಮೂದಿಸಿದೆ.

**ಕೋಷ್ಟಕ**

| ಅನುಕ್ರಮ ಸಂಖ್ಯೆ | ಪ್ರಾದೇಶಿಕ ಚುನಾವಣಾಕ್ಷೇತ್ರದ ಹೆಸರು | ಸ್ಥಾನಗಳನ್ನು ಮೀಸಲಿರಿಸಿದ ಪ್ರವರ್ಗ ಹಾಗೂ ಮೀಸಲಿಟ್ಟಿರದ ಸ್ಥಾನಗಳು |
|---|---|---|
| **1** | **2** | **3** |
| 1. | ತಾವರೆಕೆರೆ | ಹಿಂದುಳಿದ ಬ ವರ್ಗ |
| 2. | ಚುಂಚನಕುಪ್ಪೆ | ಸಾಮಾನ್ಯ |
| 3. | ಚೋಳನಾಯಕನಹಳ್ಳಿ | ಸಾಮಾನ್ಯ |
| 4. | ಚಿಕ್ಕನಹಳ್ಳಿ | ಸಾಮಾನ್ಯ ಮಹಿಳೆ |
| 5. | ಕುಂಬಳಗೋಡು | ಸಾಮಾನ್ಯ ಮಹಿಳೆ |
| 6. | ರಾಮೋಹಳ್ಳಿ | ಹಿಂದುಳಿದ ಅ ವರ್ಗ ಮಹಿಳೆ |
| 7. | ಕೆ.ಗೊಲ್ಲಹಳ್ಳಿ | ಸಾಮಾನ್ಯ ಮಹಿಳೆ |
| 8. | ಅಗರ | ಸಾಮಾನ್ಯ |
| 9. | ಕಗ್ಗಲೀಪುರ | ಅನುಸೂಚಿತ ಜಾತಿ ಮಹಿಳೆ |
| 10. | ಸೋಮನಹಳ್ಳಿ | ಅನುಸೂಚಿತ ಪಂಗಡ ಮಹಿಳೆ |
| 11. | ದೊಡ್ಡತೋಗೂರು | ಅನುಸೂಚಿತ ಜಾತಿ |
| 12. | ಕೋನಪ್ಪನ ಅಗ್ರಹಾರ | ಹಿಂದುಳಿದ ಅ ವರ್ಗ ಮಹಿಳೆ |

ಆದೇಶಾನುಸಾರ
**ಸಿ.ಆರ್.ರೇವಣ್ಣ**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ

# ವಿಶೇಷ ಪತ್ರಿಕೆ

ಭಾಗ – ***III*** | **ಬೆಂಗಳೂರು, ಸೋಮವಾರ, ನವೆಂಬರ್ ೧೫, ೨೦೧೦ (ಕಾರ್ತೀಕ ೨೪, ಶಕ ವರ್ಷ ೧೯೩೨)** | ನಂ. ೧೫೫೪

**ರಾಜ್ಯ ಚುನಾವಣಾ ಆಯೋಗ, ಕರ್ನಾಟಕ**

**ಕೆ.ಎಸ್.ಸಿ.ಎಂ.ಎಫ್. ಮಂಡಳಿ ಕಟ್ಟಡ (ಹಿಂಭಾಗ) ನಂ. 8, 1ನೇ ಮಹಡಿ ಕನ್ನಿಂಗ್ ಹ್ಯಾಂ ರಸ್ತೆ, ಬೆಂಗಳೂರು–52**

**ಅಧಿಸೂಚನೆ**

**ಸಂಖ್ಯೆ: ರಾಚುಆ: 47 :ಟಿಜಿಡಬ್‌ಪಿ:2010, ದಿನಾಂಕ: 15-11-2010**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ (1993ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 123 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹಾಗೂ ಈ ಹಿಂದೆ ಈ ಕುರಿತು ಹೊರಡಿಸಿರುವ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ, ಕರ್ನಾಟಕ ರಾಜ್ಯ ಚುನಾವಣಾ ಆಯೋಗವು **ಬೆಂಗಳೂರು ನಗರ ಜಿಲ್ಲೆಯ ಬೆಂಗಳೂರು ಪೂರ್ವ ತಾಲ್ಲೂಕು ಪಂಚಾಯಿತಿಯ** ವ್ಯಾಪ್ತಿಯಲ್ಲಿರುವ ಈ ಕೆಳಗಿನ ಕೋಷ್ಟಕದ 2ನೇ ಅಂಕಣದಲ್ಲಿ ನಮೂದಿಸಿದ ತಾಲ್ಲೂಕು ಪಂಚಾಯತಿಯ ಪ್ರಾದೇಶಿಕ ಚುನಾವಣಾ ಕ್ಷೇತ್ರದ ಸ್ಥಾನವನ್ನು ಸದರಿ ಕೋಷ್ಟಕದ 3ನೇ ಅಂಕಣದಲ್ಲಿ ನಮೂದಿಸಿದ ಪ್ರವರ್ಗಕ್ಕೆ ಮೀಸಲಾಗಿದೆಯೆಂದು ನಿರ್ಧರಿಸಿದೆ. ಮೀಸಲಿಟ್ಟಿರದ ಸ್ಥಾನವನ್ನು ಸಹ (3)ನೇ ಅಂಕಣದಲ್ಲಿ ನಮೂದಿಸಿದೆ.

**ಕೋಷ್ಟಕ**

| ಅನುಕ್ರಮ ಸಂಖ್ಯೆ | ಪ್ರಾದೇಶಿಕ ಚುನಾವಣಾಕ್ಷೇತ್ರದ ಹೆಸರು | ಸ್ಥಾನಗಳನ್ನು ಮೀಸಲಿರಿಸಿದ ಪ್ರವರ್ಗ ಹಾಗೂ ಮೀಸಲಿಟ್ಟಿರದ ಸ್ಥಾನಗಳು |
|---|---|---|
| 1 | 2 | 3 |
| 1. | ಕಣ್ಣೂರು | ಸಾಮಾನ್ಯ ಮಹಿಳೆ |
| 2. | ಯರ್ರಪ್ಪನಹಳ್ಳಿ | ಅನುಸೂಚಿತ ಜಾತಿ ಮಹಿಳೆ |
| 3. | ಬಿದರಹಳ್ಳಿ | ಸಾಮಾನ್ಯ ಮಹಿಳೆ |
| 4. | ದೊಡ್ಡಗುಬ್ಬಿ | ಸಾಮಾನ್ಯ |
| 5. | ಮಂಡೂರು | ಅನುಸೂಚಿತ ಪಂಗಡ ಮಹಿಳೆ |
| 6. | ಹುಸ್ಕೂರು | ಅನುಸೂಚಿತ ಜಾತಿ |
| 7. | ಕೋನದಾಸನಪುರ | ಸಾಮಾನ್ಯ ಮಹಿಳೆ |
| 8. | ಸೀಗೇಹಳ್ಳಿ | ಸಾಮಾನ್ಯ |
| 9. | ಆವಲಹಳ್ಳಿ | ಹಿಂದುಳಿದ ಅ ವರ್ಗ ಮಹಿಳೆ |
| 10. | ವೀರೇನಹಳ್ಳಿ | ಸಾಮಾನ್ಯ |
| 11. | ಕೊಡತಿ | ಅನುಸೂಚಿತ ಜಾತಿ ಮಹಿಳೆ |

ಆದೇಶಾನುಸಾರ
**ಸಿ.ಆರ್.ರೇವಣ್ಣ**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ

# ವಿಶೇಷ ಪತ್ರಿಕೆ

| ಭಾಗ – ***III*** | **ಬೆಂಗಳೂರು, ಸೋಮವಾರ, ನವೆಂಬರ್ ೧೫, ೨೦೧೦ (ಕಾರ್ತೀಕ ೨೪, ಶಕ ವರ್ಷ ೧೯೩೨)** | ನಂ. ೧೫೫೫ |
|---|---|---|

## ರಾಜ್ಯ ಚುನಾವಣಾ ಆಯೋಗ, ಕರ್ನಾಟಕ

**ಕೆ.ಎಸ್.ಸಿ.ಎಂ.ಎಫ್. ಮಂಡಳಿ ಕಟ್ಟಡ (ಹಿಂಭಾಗ) ನಂ. 8, 1ನೇ ಮಹಡಿ ಕನ್ನಿಂಗ್ ಹ್ಯಾಂ ರಸ್ತೆ, ಬೆಂಗಳೂರು–52**

**ಅಧಿಸೂಚನೆ**

**ಸಂಖ್ಯೆ: ರಾಚುಆ: 48 :ಟಿಜಡ್‌ಪಿ:2010, ದಿನಾಂಕ: 15-11-2010**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ (1993ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 123 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹಾಗೂ ಈ ಹಿಂದೆ ಈ ಕುರಿತು ಹೊರಡಿಸಿರುವ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ, ಕರ್ನಾಟಕ ರಾಜ್ಯ ಚುನಾವಣಾ ಆಯೋಗವು **ಬೆಂಗಳೂರು ನಗರ ಜಿಲ್ಲೆಯ ಆನೇಕಲ್ ತಾಲ್ಲೂಕು ಪಂಚಾಯಿತಿಯ** ವ್ಯಾಪ್ತಿಯಲ್ಲಿರುವ ಈ ಕೆಳಗಿನ ಕೋಷ್ಟಕದ 2ನೇ ಅಂಕಣದಲ್ಲಿ ನಮೂದಿಸಿದ ತಾಲ್ಲೂಕು ಪಂಚಾಯತಿಯ ಪ್ರಾದೇಶಿಕ ಚುನಾವಣಾ ಕ್ಷೇತ್ರದ ಸ್ಥಾನವನ್ನು ಸದರಿ ಕೋಷ್ಟಕದ 3ನೇ ಅಂಕಣದಲ್ಲಿ ನಮೂದಿಸಿದ ಪ್ರವರ್ಗಕ್ಕೆ ಮೀಸಲಾಗಿದೆಯೆಂದು ನಿರ್ಧರಿಸಿದೆ. ಮೀಸಲಿಟ್ಟಿರದ ಸ್ಥಾನವನ್ನು ಸಹ (3)ನೇ ಅಂಕಣದಲ್ಲಿ ನಮೂದಿಸಿದೆ.

**ಕೋಷ್ಟಕ**

| ಅನುಕ್ರಮ ಸಂಖ್ಯೆ | ಪ್ರಾದೇಶಿಕ ಚುನಾವಣಾಕ್ಷೇತ್ರದ ಹೆಸರು | ಸ್ಥಾನಗಳನ್ನು ಮೀಸಲಿರಿಸಿದ ಪ್ರವರ್ಗ ಹಾಗೂ ಮೀಸಲಿಟ್ಟಿರದ ಸ್ಥಾನಗಳು |
|---|---|---|
| 1 | 2 | 3 |
| 1. | ಸರ್ಜಾಪುರ | ಅನುಸೂಚಿತ ಜಾತಿ |
| 2. | ಮುಗಳೂರು | ಸಾಮಾನ್ಯ |

| ಅನುಕ್ರಮ ಸಂಖ್ಯೆ | ಪ್ರಾದೇಶಿಕ ಚುನಾವಣಾಕ್ಷೇತ್ರದ ಹೆಸರು | ಸ್ಥಾನಗಳನ್ನು ಮೀಸಲಿರಿಸಿದ ಪ್ರವರ್ಗ ಹಾಗೂ ಮೀಸಲಿಟ್ಟಿರದ ಸ್ಥಾನಗಳು |
|---|---|---|
| **1** | **2** | **3** |
| 3. | ನೆರಿಗಾ | ಸಾಮಾನ್ಯ |
| 4. | ದೊಮ್ಮಸಂದ್ರ | ಸಾಮಾನ್ಯ ಮಹಿಳೆ |
| 5. | ಯಮರೆ | ಸಾಮಾನ್ಯ |
| 6. | ಹಂದೇನಹಳ್ಳಿ | ಅನುಸೂಚಿತ ಜಾತಿ |
| 7. | ಬಿದರಗುಪ್ಪೆ | ಸಾಮಾನ್ಯ ಮಹಿಳೆ |
| 8. | ನೆರೆಳೂರು | ಸಾಮಾನ್ಯ ಮಹಿಳೆ |
| 9. | ಚಂದಾಪೂರ | ಸಾಮಾನ್ಯ ಮಹಿಳೆ |
| 10. | ಬೊಮ್ಮಸಂದ್ರ | ಹಿಂದುಳಿದ ಅ ವರ್ಗ ಮಹಿಳೆ |
| 11. | ಹುಸ್ಕೂರು | ಅನುಸೂಚಿತ ಜಾತಿ ಮಹಿಳೆ |
| 12. | ಹೆಬ್ಬಗೋಡಿ | ಹಿಂದುಳಿದ ಅ ವರ್ಗ ಮಹಿಳೆ |
| 13. | ವೀರಸಂದ್ರ | ಹಿಂದುಳಿದ ಬ ವರ್ಗ |
| 14. | ಅತ್ತಿಬೆಲೆ | ಹಿಂದುಳಿದ ಅ ವರ್ಗ |
| 15. | ಮಾಯಸಂದ್ರ | ಸಾಮಾನ್ಯ |
| 16. | ಬಳ್ಳೂರು | ಸಾಮಾನ್ಯ ಮಹಿಳೆ |
| 17. | ವಣಕನಹಳ್ಳಿ | ಅನುಸೂಚಿತ ಜಾತಿ |
| 18. | ಮರಸೂರು | ಅನುಸೂಚಿತ ಜಾತಿ ಮಹಿಳೆ |
| 19. | ಕರ್ಪೂರು | ಸಾಮಾನ್ಯ |
| 20. | ಇಂಡ್ಲವಾಡಿ | ಅನುಸೂಚಿತ ಜಾತಿ ಮಹಿಳೆ |
| 21. | ಹುಲಿಮಂಗಲ | ಅನುಸೂಚಿತ ಜಾತಿ |
| 22. | ಮಂಟಪ | ಅನುಸೂಚಿತ ಜಾತಿ ಮಹಿಳೆ |
| 23. | ಜಿಗಣಿ | ಸಾಮಾನ್ಯ ಮಹಿಳೆ |
| 24. | ಹೆನ್ನಾಗರ | ಸಾಮಾನ್ಯ ಮಹಿಳೆ |
| 25. | ಬನ್ನೇರುಘಟ್ಟ | ಅನುಸೂಚಿತ ಪಂಗಡ ಮಹಿಳೆ |
| 26. | ಹಾರಗದ್ದೆ | ಸಾಮಾನ್ಯ |
| 27. | ಕಲ್ಲುಬಾಳು | ಸಾಮಾನ್ಯ |

ಆದೇಶಾನುಸಾರ
**ಸಿ.ಆರ್.ರೇವಣ್ಣ**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ

**ವಿಶೇಷ ಪತ್ರಿಕೆ**

| ಭಾಗ – ***IV-A*** | ಬೆಂಗಳೂರು, ಗುರುವಾರ, ನವೆಂಬರ್ ೧೮, ೨೦೧೦ (ಕಾರ್ತೀಕ ೨೭, ಶಕ ವರ್ಷ ೧೯೩೨) | ನಂ. ೧೫೫೬ |
|---|---|---|

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ಅಧಿಸೂಚನೆ**

**ಸಂ. ಗ್ರಾಅಪ 180 ಜಿಪಸ 2010, ಬೆಂಗಳೂರು, ದಿನಾಂಕ 16.11.2010**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ (1993ರ ಅಧಿನಿಯಮ, 14), 311(1) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಸರ್ಕಾರವು, ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) ನಿಯಮಗಳು, 1993ನ್ನು ತಿದ್ದುಪಡಿ ಮಾಡಲು ಉದ್ದೇಶಿಸಿ ಕರಡನ್ನು ಅಧಿಸೂಚನೆ ಸಂ.ಆರ್‌ಡಿಪಿ 180 ಜೆಡ್‌ಪಿಎಸ್ 2010, ದಿನಾಂಕ 28.10.2010ರ ಮೂಲಕ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ 4–ಎ ರ, ನಂ.1323ರಲ್ಲಿ ದಿನಾಂಕ 29.10.2010 ರಂದು ಪ್ರಕಟಿಸಿದ್ದು, ಆ ಮೂಲಕ ಬಾಧಿತರಾಗುವ ಸಂಭವವಿರುವ ವ್ಯಕ್ತಿಗಳಿಂದ 15 ದಿನಗಳ ಒಳಗಾಗಿ ಆಕ್ಷೇಪಣೆ ಮತ್ತು ಸಲಹೆಗಳನ್ನು ಆಹ್ವಾನಿಸಿ ಪ್ರಕಟಿಸಿರುವುದರಿಂದ;

ಮತ್ತು 29.10.2010 ರಂದು ಸದರಿ ರಾಜ್ಯ ಪತ್ರವನ್ನು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ಕರಡಿನ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವುದೇ ಆಕ್ಷೇಪಣೆ ಅಥವಾ ಸಲಹೆಗಳು ಬಾರದಿರುವುದರಿಂದ;

ಈಗ 1993ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ (ಕರ್ನಾಟಕ ಅಧಿನಿಯಮ 14)ರ 311(1)ನೇ ಪ್ರಕರಣದೊಂದಿಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡಂತೆ ನಿಯಮಗಳನ್ನು ರಚಿಸುತ್ತದೆ ಎಂದರೆ.–

**ನಿಯಮಗಳು**

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) (ತಿದ್ದುಪಡಿ) ನಿಯಮಗಳು, 2010 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರದ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಅಧ್ಯಾಯ 3ನ್ನು ಹೊಸದಾಗಿ ಸೇರ್ಪಡೆ ಮಾಡುವ ಬಗ್ಗೆ.–** ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) ನಿಯಮಗಳು, 1993 (ಇದನ್ನು ಸಂಬಂಧಿಸಿದ ನಿಯಮಗಳು) ಎಂದು ಉಲ್ಲೇಖಿಸತಕ್ಕದ್ದು.

ನಿಯಮ 85ನ್ನು ನಿಯಮ 115 ಎಂದು ಮರುಸಂಖ್ಯಾಧಿಕರಣಗೊಳಿಸುವುದು ಮತ್ತು ಹೀಗೆ ಮರುಸಂಖ್ಯಾಧಿಕರಣ ಗೊಳಿಸುವ ಮೊದಲು ಈ ಕೆಳಕಾಣಿಸಿದಂತೆ ಸೇರಿಸತಕ್ಕದ್ದು. ಅಂದರೆ;

**ಅಧ್ಯಾಯ – *III***

**ವಿದ್ಯುನ್ಮಾನ ಮತಯಂತ್ರಗಳ ಮೂಲಕ ಮತದಾನ**

**85. ಈ ಅಧ್ಯಾಯದ ಉಪಬಂಧಗಳ ಅನ್ವಯ ಮತ್ತು ವಿದ್ಯುನ್ಮಾನ ಮತಯಂತ್ರಗಳ ವಿನ್ಯಾಸ.–** (1) ಈ ಅಧ್ಯಾಯದ ಉಪಬಂಧಗಳು, ಜಿಲ್ಲಾ ಪಂಚಾಯತ್‌ಗೆ, ತಾಲೂಕು ಪಂಚಾಯತ್‌ಗೆ ಮತ್ತು ಗ್ರಾಮ ಪಂಚಾಯತ್‌ಗೆ ಚುನಾವಣೆಗಳನ್ನು ನಡೆಸುವಾಗ, ವಿದ್ಯುನ್ಮಾನ ಮತಯಂತ್ರಗಳನ್ನು ಬಳಸುವಲ್ಲೆಲ್ಲಾ ಅನ್ವಯವಾಗತಕ್ಕದ್ದು.

(2) ಪ್ರತಿಯೊಂದು ವಿದ್ಯುನ್ಮಾನ ಮತಯಂತ್ರವು (ಇದರಲ್ಲಿ ಇನ್ನು ಮುಂದೆ ಮತಯಂತ್ರ ಎಂದು ಉಲ್ಲೇಖಿಸಲಾಗಿದೆ) ಎರಡು ಯೂನಿಟ್‌ಗಳನ್ನು ಎಂದರೆ, ಒಂದು ಕಂಟ್ರೋಲ್ ಯೂನಿಟ್ಟನ್ನು ಮತ್ತು ಒಂದು ಬ್ಯಾಲೆಟಿಂಗ್ ಯೂನಿಟ್ಟನ್ನು ಹೊಂದಿರತಕ್ಕದ್ದು ಮತ್ತು ಅದು ರಾಜ್ಯ ಚುನಾವಣಾ ಆಯೋಗವು ಅನುಮೋದಿಸಿದಂಥ ವಿನ್ಯಾಸಗಳದ್ದಾಗಿರತಕ್ಕದ್ದು.

**86. ರಿಟರ್ನಿಂಗ್ ಆಫೀಸರ್ ಅವರು ಮತಯಂತ್ರಗಳನ್ನು ಸಿದ್ಧಪಡಿಸುವುದು.–** (1) ಮತಯಂತ್ರದ ಬ್ಯಾಲೆಟಿಂಗ್ ಯೂನಿಟ್‌ನಲ್ಲಿ, ಚುನಾವಣಾ ಆಯೋಗವು ನಿರ್ದಿಷ್ಟಪಡಿಸಬಹುದಾದಂತಹ ವಿವರಗಳು ಕನ್ನಡ ಭಾಷೆಯಲ್ಲಿ ಅಥವಾ ಇತರ ಭಾಷೆಗಳಲ್ಲಿ ಇರತಕ್ಕದ್ದು.

(2) ಉಮೇದುವಾರರ ಹೆಸರುಗಳನ್ನು ಬ್ಯಾಲೆಟಿಂಗ್ ಯೂನಿಟ್‌ನ ಮೇಲೆ, ಸ್ಪರ್ಧಿಸಿರುವ ಉಮೇದುವಾರರ ಪಟ್ಟಿಯಲ್ಲಿ ಇರುವಂತಹ ಕ್ರಮದಲ್ಲಿಯೇ ಅವುಗಳನ್ನು ವ್ಯವಸ್ಥೆ ಮಾಡತಕ್ಕದ್ದು.

(3) ಒಂದೇ ಹೆಸರಿನ ಇಬ್ಬರು ಅಥವಾ ಹೆಚ್ಚು ಉಮೇದುವಾರರು ಇದ್ದರೆ, ಅವರ ಹೆಸರುಗಳ ಜೊತೆ ತಂದೆಯ ಹೆಸರನ್ನು ಅಥವಾ ವಾಸಸ್ಥಳದ ಹೆಸರನ್ನು ಸೇರಿಸುವ ಮೂಲಕ ಅಥವಾ ಚುನಾವಣಾ ಆಯೋಗವು ನಿರ್ದಿಷ್ಟಪಡಿಸಬಹುದಾದಂಥ ಇನ್ನಾವುದೇ ವಿಧಾನದ ಮೂಲಕ ವಿಭಿನ್ನವಾಗಿ ತೋರಿಸತಕ್ಕದ್ದು.

(4) ಈ ನಿಯಮದ ಹಿಂದಿನ ಉಪಬಂಧಗಳಿಗೆ ಒಳಪಟ್ಟು, ರಿಟರ್ನಿಂಗ್ ಆಫೀಸರ್ ಅವರು,–

(ಎ) ಸ್ಪರ್ಧಿಸಿರುವ ಉಮೇದುವಾರರ ಹೆಸರುಗಳು ಮತ್ತು ಚಿಹ್ನೆಗಳನ್ನು ಒಳಗೊಂಡಿರುವ ಲೇಬಲ್‌ಗಳನ್ನು ಬ್ಯಾಲೆಟಿಂಗ್ ಯೂನಿಟ್‌ನಲ್ಲಿ ಅಂಟಿಸತಕ್ಕದ್ದು ಮತ್ತು ತನ್ನ ಮೊಹರನ್ನು ಹಾಕಿ ಹಾಗೂ ಅಲ್ಲಿ ಹಾಜರಿದ್ದು ತಮ್ಮ ಮೊಹರನ್ನು ಹಾಕಲು ಇಚ್ಛಿಸುವಂತಹ ಉಮೇದುವಾರರು ಅಥವಾ ಅವರ ಚುನಾವಣಾ ಏಜೆಂಟರ ಮೊಹರುಗಳನ್ನು ಹಾಕಿಸಿ ಅದನ್ನು ಭದ್ರಗೊಳಿಸತಕ್ಕದ್ದು.

(ಬಿ) ಕಂಟ್ರೋಲ್ ಯೂನಿಟ್‌ನಲ್ಲಿ ಸ್ಪರ್ಧಿಸಿರುವ ಉಮೇದುವಾರರ ಸಂಖ್ಯೆಯನ್ನು ಸೆಟ್ ಮಾಡತಕ್ಕದ್ದು ಮತ್ತು ಉಮೇದುವಾರರ ಸೆಟ್ ವಿಭಾಗವನ್ನು ಮುಚ್ಚತಕ್ಕದ್ದು ಮತ್ತು ತನ್ನ ಮೊಹರನ್ನು ಹಾಕಿ ಹಾಗೂ ಅಲ್ಲಿ ಹಾಜರಿದ್ದು ತಮ್ಮ ಮೊಹರು ಹಾಕಲು ಇಚ್ಛಿಸುವ ಸ್ಪರ್ಧಿಸಿರುವ ಉಮೇದುವಾರರು ಅಥವಾ ಅವರ ಚುನಾವಣಾ ಏಜೆಂಟರ ಮೊಹರುಗಳನ್ನು ಹಾಕಿಸಿ ಅದನ್ನು ಭದ್ರಗೊಳಿಸತಕ್ಕದ್ದು.

**87. ಮತಗಟ್ಟೆಗಳಲ್ಲಿ ಏರ್ಪಾಟು.–** (1) ಪ್ರತಿಯೊಂದು ಮತಗಟ್ಟೆಯ ಹೊರಗಡೆ–

(ಎ) ಯಾವ ಮತದಾನ ಪ್ರದೇಶದ ಮತದಾರರು ಮತಗಟ್ಟೆಯಲ್ಲಿ ಮತ ಚಲಾಯಿಸಲು ಹಕ್ಕುಳ್ಳವರಾಗಿದ್ದಾರೆ ಎಂಬುದನ್ನು ಮತ್ತು ಮತದಾನದ ಪ್ರದೇಶವು ಒಂದಕ್ಕಿಂತ ಹೆಚ್ಚು ಮತಗಟ್ಟೆಯನ್ನು ಹೊಂದಿದ್ದರೆ, ಹಾಗೆ ಮತ ಚಲಾಯಿಸಲು ಹಕ್ಕುಳ್ಳ ಮತದಾರರ ವಿವರಗಳನ್ನು ನಿರ್ದಿಷ್ಟಪಡಿಸಿರುವ ಒಂದು ನೋಟೀಸನ್ನು; ಮತ್ತು

(ಬಿ) ಸ್ಪರ್ಧಿಸಿರುವ ಉಮೇದುವಾರರ ಪಟ್ಟಿಯ ಒಂದು ಪ್ರತಿಯನ್ನು

– ಎದ್ದು ಕಾಣುವಂತೆ ಪ್ರದರ್ಶಿಸತಕ್ಕದ್ದು.

(2) ಪ್ರತಿಯೊಂದು ಮತಗಟ್ಟೆಯಲ್ಲಿ, ಮತದಾರರು ಮತ್ತೊಬ್ಬರಿಗೆ ಕಾಣದಂತೆ ತಮ್ಮ ಮತ ಚಲಾಯಿಸಲು ಸಾಧ್ಯವಾಗುವ ಹಾಗೆ ಒಂದು ಅಥವಾ ಹೆಚ್ಚು ವೋಟಿಂಗ್ ಕಂಪಾರ್ಟ್‌ಮೆಂಟ್‌ಗಳನ್ನು ಸ್ಥಾಪಿಸತಕ್ಕದ್ದು.

(3) ರಿಟರ್ನಿಂಗ್ ಆಫೀಸರ್‌ರವರು ಪ್ರತಿಯೊಂದು ಮತಗಟ್ಟೆಯಲ್ಲಿ ಒಂದು ಮತಯಂತ್ರವನ್ನು ಮತ್ತು ಮತದಾರರ ಪಟ್ಟಿಯ ಸಂಬಂಧಪಟ್ಟ ಭಾಗಗಳ ಪ್ರತಿಗಳನ್ನು ಮತ್ತು ಮತದಾನಕ್ಕೆ ಅಗತ್ಯವಿರುವಂತಹ ಇತರ ಚುನಾವಣಾ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

(4) (3)ನೇ ಉಪನಿಯಮದ ಉಪಬಂಧಗಳಿಗೆ ಬಾಧಕವಾಗದಂತೆ, ರಿಟರ್ನಿಂಗ್ ಆಫೀಸರ್ ಅವರು ರಾಜ್ಯ ಚುನಾವಣಾ ಆಯೋಗದ ಪೂರ್ವಾನುಮೋದನೆ ಪಡೆದು, ಒಂದೇ ಆವರಣದಲ್ಲಿ ಸ್ಥಾಪಿಸಲಾಗಿರುವ ಎರಡು ಅಥವಾ ಹೆಚ್ಚು ಮತಗಟ್ಟೆಗಳಿಗೆ ಒಂದು ಕಾಮನ್ ಮತಯಂತ್ರವನ್ನು ಒದಗಿಸಬಹುದು.

**88. ಮತಗಟ್ಟೆಗೆ ಪ್ರವೇಶ.–** ಪ್ರಿಸೈಡಿಂಗ್ ಆಫೀಸರ್‌ರವರು ಮತಗಟ್ಟೆಯೊಳಗೆ ಯಾವುದೇ ಒಂದು ಸಮಯಕ್ಕೆ ಒಳಬರಬಹುದಾದಂಥ ಮತದಾರರ ಸಂಖ್ಯೆಯನ್ನು ನಿಯಂತ್ರಿಸತಕ್ಕದ್ದು ಮತ್ತು ಅಲ್ಲಿಂದ–

(ಎ) ಪೋಲಿಂಗ್ ಆಫೀಸರ್‌ಗಳನ್ನು;

(ಬಿ) ಚುನಾವಣೆಗೆ ಸಂಬಂಧಿಸಿದಂತೆ ಕರ್ತವ್ಯದ ಮೇಲಿರುವ ಸರ್ಕಾರಿ ನೌಕರರನ್ನು;

(ಸಿ) ಚುನಾವಣಾ ಆಯೋಗವು ಅಧಿಕಾರ ನೀಡಿರುವ ವ್ಯಕ್ತಿಗಳನ್ನು;

(ಡಿ) ಉಮೇದುವಾರರು, ಅವರ ಚುನಾವಣಾ ಏಜೆಂಟರು ಮತ್ತು ನಿಯಮ 25ರ ಉಪಬಂಧಗಳಿಗೆ ಒಳಪಟ್ಟು, ಪ್ರತಿಯೊಬ್ಬ ಉಮೇದುವಾರರ ಒಬ್ಬೊಬ್ಬ ಪೋಲಿಂಗ್ ಏಜೆಂಟರನ್ನು;

(ಇ) ಮತದಾರನ ಜೊತೆಗಿರುವ ಒಂದು ಕೈಕೂಸನ್ನು;

(ಎಫ್) ಇತರರ ನೆರವಿಲ್ಲದೆ ಚಲಿಸಲಾರದ ಒಬ್ಬ ಅಂಧ ಅಥವಾ ದುರ್ಬಲ ಮತದಾರರ ಜೊತೆಗಿರುವ ವ್ಯಕ್ತಿಯನ್ನು; ಮತ್ತು

(ಜಿ) ರಿಟರ್ನಿಂಗ್ ಆಫೀಸರ್ ಅಥವಾ ಪ್ರಿಸೈಡಿಂಗ್ ಆಫೀಸರ್ ಅವರು 91ನೇ ನಿಯಮದ (2)ನೇ ಉಪನಿಯಮದ ಅಥವಾ 92ನೇ ನಿಯಮದ (1)ನೇ ಉಪನಿಯಮದ ಮೇರೆಗೆ ನಿಯೋಜಿಸಬಹುದಾದಂಥ ಇತರ ವ್ಯಕ್ತಿಗಳನ್ನು

– ಹೊರತುಪಡಿಸಿ ಎಲ್ಲ ವ್ಯಕ್ತಿಗಳನ್ನು ಹೊರಗಿರಿಸತಕ್ಕದ್ದು.

**89. ಮತದಾನಕ್ಕೆ ಮತಯಂತ್ರಗಳ ಸಿದ್ಧತೆ.–** (1) ಮತಗಟ್ಟೆಯಲ್ಲಿ ಬಳಸಲಾಗುವ ಪ್ರತಿಯೊಂದು ಮತಯಂತ್ರದ ಕಂಟ್ರೋಲ್ ಯೂನಿಟ್ಟು ಮತ್ತು ಬ್ಯಾಲೆಟಿಂಗ್ ಯೂನಿಟ್ಟುಗಳ ಮೇಲೆ

(ಎ) ಚುನಾವಣಾ ಕ್ಷೇತ್ರದ ಕ್ರಮಸಂಖ್ಯೆ ಯಾವುದಾದರೂ ಇದ್ದರೆ ಅದು ಮತ್ತು ಹೆಸರು

(ಬಿ) ಸಂದರ್ಭಾನುಸಾರ ಮತಗಟ್ಟೆಯ ಅಥವಾ ಮತಗಟ್ಟೆಗಳ ಕ್ರಮಸಂಖ್ಯೆ ಮತ್ತು ಹೆಸರು

(ಸಿ) ಯೂನಿಟ್ಟಿನ ಕ್ರಮಸಂಖ್ಯೆ; ಮತ್ತು

(ಡಿ) ಮತದಾನದ ದಿನಾಂಕ

– ಇವುಗಳನ್ನು ಗುರುತು ಮಾಡಿರುವ ಒಂದೊಂದು ಲೇಬಲ್‌ಅನ್ನು ಅಂಟಿಸಿರತಕ್ಕದ್ದು.

(2) ಮತದಾನ ಪ್ರಾರಂಭವಾಗುವ ನಿಕಟ ಮೊದಲು, ಪ್ರಿಸೈಡಿಂಗ್ ಆಫೀಸರ್ ಅವರು ಪೋಲಿಂಗ್ ಏಜೆಂಟರಿಗೆ ಮತ್ತು ಅಲ್ಲಿ ಹಾಜರಿರುವ ಇತರ ವ್ಯಕ್ತಿಗಳಿಗೆ, ಮತಯಂತ್ರದಲ್ಲಿ ಈಗಾಗಲೇ ಯಾವುದೇ ಮತ ದಾಖಲು ಮಾಡಿಲ್ಲವೆಂಬುದನ್ನು ಮತ್ತು ಅದು (4)ನೇ ಉಪನಿಯಮದಲ್ಲಿ ಉಲ್ಲೇಖಿಸಿರುವ ಪೇಪರ್ ಸೀಲ್‌ಅನ್ನು ಅದು ಹೊಂದಿದೆ ಎಂಬುದನ್ನು ಪ್ರದರ್ಶಿಸತಕ್ಕದ್ದು.

(3) ಮತಯಂತ್ರದ ಕಂಟ್ರೋಲ್ ಯೂನಿಟನ್ನು ಭದ್ರಗೊಳಿಸಲು ಒಂದು ಪೇಪರ್ ಸೀಲ್‌ಅನ್ನು ಬಳಸತಕ್ಕದ್ದು, ಮತ್ತು ಪ್ರಿಸೈಡಿಂಗ್ ಆಫೀಸರ್ ಅವರು ಪೇಪರ್ ಸೀಲ್‌ನ ಮೇಲೆ ತಮ್ಮ ಸಹಿಯನ್ನು ಹಾಕತಕ್ಕದ್ದು ಮತ್ತು ಅದರ ಮೇಲೆ ಮತಗಟ್ಟೆಯಲ್ಲಿ ಹಾಜರಿದ್ದು ತಮ್ಮ ಸಹಿ ಹಾಕಲಿಚ್ಛಿಸುವ ಪೋಲಿಂಗ್ ಏಜೆಂಟರ ಸಹಿಯನ್ನು ಪಡೆದುಕೊಳ್ಳತಕ್ಕದ್ದು.

(4) ಆ ತರುವಾಯ ಪ್ರಿಸೈಡಿಂಗ್ ಆಫೀಸರ್ ಅವರು ಹಾಗೆ ಸಹಿ ಮಾಡಲಾದ ಪೇಪರ್ ಸೀಲ್‌ಅನ್ನು ಮತಯಂತ್ರದ ಕಂಟ್ರೋಲ್ ಯೂನಿಟ್‌ನಲ್ಲಿ ಅದಕ್ಕಾಗಿ ಒದಗಿಸಿರುವ ಸ್ಥಳದಲ್ಲಿ ಅಳವಡಿಸತಕ್ಕದ್ದು ಮತ್ತು ಭದ್ರಗೊಳಿಸಿ ಅದನ್ನು ಮೊಹರು ಮಾಡತಕ್ಕದ್ದು.

(5) ಕಂಟ್ರೋಲ್ ಯೂನಿಟ್ಟನ್ನು ಭದ್ರಗೊಳಿಸಲು ಉಪಯೋಗಿಸಿದ ಸೀಲ್‌ಅನ್ನು, ಯೂನಿಟನ್ನು ಮೊಹರು ಮಾಡಿದ ಮೇಲೆ ಮೊಹರನ್ನು ಒಡೆಯದೆ "ರಿಜಲ್ಟ್ ಬಟನ್" ಒತ್ತಲು ಸಾಧ್ಯವಾಗದ ಹಾಗೆ ಅಳವಡಿಸಬೇಕು.

(6) ಕಂಟ್ರೋಲ್ ಯೂನಿಟ್ಟನ್ನು ಮುಚ್ಚಿ ಭದ್ರಗೊಳಿಸತಕ್ಕದ್ದು ಮತ್ತು ಅದನ್ನು ಪ್ರಿಸೈಡಿಂಗ್ ಆಫೀಸರ್ ಅವರಿಗೆ ಮತ್ತು ಪೋಲಿಂಗ್ ಏಜೆಂಟರುಗಳಿಗೆ ಪೂರ್ಣವಾಗಿ ಕಾಣುವಂತಿರಿಸಬೇಕು ಮತ್ತು ವೋಟಿಂಗ್ ಕಂಪಾರ್ಟ್‌ಮೆಂಟ್‌ನಲ್ಲಿ ಬ್ಯಾಲೆಟಿಂಗ್ ಯೂನಿಟ್ಟನ್ನು ಇಡಬೇಕು.

**90. ಗುರುತು ಮಾಡಿರುವ ಮತದಾರರ ಪಟ್ಟಿಯ ಪ್ರತಿ.–** ಮತದಾನ ಪ್ರಾರಂಭಗೊಳ್ಳುವ ನಿಕಟ ಮೊದಲು, ಪ್ರಿಸೈಡಿಂಗ್ ಆಫೀಸರ್ ಅವರು ಮತದಾನದ ಅವಧಿಯಲ್ಲಿ ಉಪಯೋಗಿಸಲಾಗುವ ಗುರುತು ಮಾಡಿದ ಮತದಾರರ ಪಟ್ಟಿಯ ಪ್ರತಿಯು,–

(ಎ) 41ನೇ ನಿಯಮಕ್ಕೆ ಅನುಸಾರವಾಗಿ ಮಾಡಲಾದ ನಮೂದಿನ ಹೊರತಾದ ಯಾವುದೇ ನಮೂದನ್ನು; ಮತ್ತು

(ಬಿ) 41ನೇ ನಿಯಮದ (2)ನೇ ಉಪನಿಯಮದ (ಬಿ) ಖಂಡದ ಅನುಸಾರವಾಗಿ ಮಾಡಲಾದ ಗುರುತಿನ ಹೊರತಾದ ಇತರ ಯಾವುದೇ ಗುರುತನ್ನು

– ಒಳಗೊಂಡಿಲ್ಲವೆಂಬುದನ್ನು ಸಹಾ ಪೋಲಿಂಗ್ ಏಜೆಂಟರುಗಳಿಗೆ ಮತ್ತು ಅಲ್ಲಿ ಹಾಜರಿರುವ ಇತರರಿಗೆ ಪ್ರದರ್ಶಿಸತಕ್ಕದ್ದು.

**91. ಮಹಿಳಾ ಮತದಾರರಿಗೆ ಸೌಲಭ್ಯಗಳು.–** (1) ಒಂದು ಮತಗಟ್ಟೆಯಲ್ಲಿ ಪುರುಷ ಮತ್ತು ಮಹಿಳಾ ಮತದಾರರುಗಳು ಮತ ಚಲಾಯಿಸಬೇಕಾಗಿರುವಾಗ, ಪ್ರಿಸೈಡಿಂಗ್ ಆಫೀಸರ್ ಅವರು ಅವರನ್ನು ಪ್ರತ್ಯೇಕ ತಂಡಗಳಲ್ಲಿ ಪರ್ಯಾಯವಾಗಿ ಮತಗಟ್ಟೆಯೊಳಗೆ ಬಿಡುವಂತೆ ನಿರ್ದೇಶಿಸಬಹುದು.

(2) ರಿಟರ್ನಿಂಗ್ ಆಫೀಸರ್ ಅಥವಾ ಪ್ರಿಸೈಡಿಂಗ್ ಆಫೀಸರ್ ಅವರು ಮಹಿಳಾ ಮತದಾರರಿಗೆ ನೆರವಾಗಲು ಹಾಗೂ ಒಟ್ಟಾರೆ ಮಹಿಳಾ ಮತದಾರರ ಸಂಬಂಧದಲ್ಲಿ ಮತಚಲಾವಣೆ ಮಾಡಿಸುವುದಕ್ಕೆ ಪ್ರಿಸೈಡಿಂಗ್ ಆಫೀಸರ್ ಅವರಿಗೆ ನೆರವಾಗಲು, ಮತ್ತು ನಿರ್ದಿಷ್ಟವಾಗಿ ಅವಶ್ಯವಾದಾಗ ಯಾರೇ ಮಹಿಳಾ ಮತದಾರರನ್ನು ಶೋಧಿಸಲು ನೆರವಾಗುವುದಕ್ಕಾಗಿ ಯಾವುದೇ ಮತಗಟ್ಟೆಯಲ್ಲಿ ಒಬ್ಬ ಸಹಾಯಕಿಯಾಗಿ ಕೆಲಸ ಮಾಡಲು ಒಬ್ಬ ಮಹಿಳೆಯನ್ನು ನೇಮಕ ಮಾಡಿಕೊಳ್ಳಬಹುದು.

**92. ಮತದಾರರನ್ನು ಗುರುತಿಸುವುದು.–** (1) ಪ್ರಿಸೈಡಿಂಗ್ ಆಫೀಸರ್‌ರವರು, ಮತಗಟ್ಟೆಯಲ್ಲಿ ಮತದಾರರನ್ನು ಗುರುತಿಸಲು ನೆರವಾಗುವುದಕ್ಕೆ ಅಥವಾ ಮತದಾನ ನಡೆಯುತ್ತಿರುವಾಗ ತಮಗೆ ಇತರ ರೀತಿಯಲ್ಲಿ ನೆರವಾಗುವುದಕ್ಕೆ ತಾವು ಸೂಕ್ತವೆಂದು ಭಾವಿಸುವಂಥ ವ್ಯಕ್ತಿಗಳನ್ನು ನೇಮಕ ಮಾಡಿಕೊಳ್ಳಬಹುದು.

(2) ಪ್ರತಿಯೊಬ್ಬ ಮತದಾರನು ಮತಗಟ್ಟೆಗೆ ಪ್ರವೇಶಿಸುತ್ತಿದ್ದಂತೆ, ಪ್ರಿಸೈಡಿಂಗ್ ಆಫೀಸರ್ ಅವರು ಅಥವಾ ಈ ಪರವಾಗಿ ಅವರಿಂದ ಅಧಿಕಾರ ಪಡೆದ ಪೋಲಿಂಗ್ ಆಫೀಸರ್‌ರವರು ಮತದಾರರ ಹೆಸರನ್ನು ಮತ್ತು ಇತರ ವಿವರಗಳನ್ನು ಮತದಾರರ ಪಟ್ಟಿಯಲ್ಲಿರುವ ಸಂಬಂಧಪಟ್ಟ ನಮೂದನೆಯೊಂದಿಗೆ ಪರೀಕ್ಷಿಸತಕ್ಕದ್ದು ಮತ್ತು ಆನಂತರ ಮತದಾರರ ಕ್ರಮಸಂಖ್ಯೆ, ಹೆಸರು ಮತ್ತು ಇತರ ವಿವರಗಳನ್ನು ಓದಿ ಹೇಳತಕ್ಕದ್ದು.

(3) ಜನತಾ ಪ್ರಾತಿನಿಧ್ಯ ಅಧಿನಿಯಮ, 1950 (1950ರ ಕೇಂದ್ರ ಅಧಿನಿಯಮ 43)ರ ಮೇರೆಗೆ ರಚಿಸಲಾದ ಮತದಾರರ ನೋಂದಣಿ ನಿಯಮಗಳು, 1960ರ ಉಪಬಂಧಗಳ ಅಡಿಯಲ್ಲಿ ಯಾವ ಕ್ಷೇತ್ರದ ಮತದಾರರಿಗೆ ಗುರುತಿನ ಚೀಟಿಗಳನ್ನು ಒದಗಿಸಲಾಗಿರುವುದೋ ಆ ಕ್ಷೇತ್ರದಲ್ಲಿ ಮತಗಟ್ಟೆಯು ಇರುವಲ್ಲಿ, ಮತದಾರನು ಪ್ರಿಸೈಡಿಂಗ್ ಆಫೀಸರ್ ಅವರ ಅಥವಾ ಈ ಪರವಾಗಿ ಅವರಿಂದ ಅಧಿಕಾರ ಪಡೆದಿರುವ ಪೋಲಿಂಗ್ ಆಫೀಸರ್‌ರವರ ಮುಂದೆ ತನ್ನ ಗುರುತಿನ ಚೀಟಿಯನ್ನು ಹಾಜರುಪಡಿಸತಕ್ಕದ್ದು.

(4) ಒಬ್ಬ ವ್ಯಕ್ತಿಗೆ ಆತನ ಮತ ಚಲಾಯಿಸಲು ಇರುವ ಹಕ್ಕನ್ನು ನಿರ್ಧರಿಸುವಾಗ, ಯಾವ ವ್ಯಕ್ತಿಗೆ ಮತದಾರರ ಪಟ್ಟಿಯಲ್ಲಿನ ನಮೂದನೆಯು ಸಂಬಂಧಿಸಿದೆಯೋ ಆ ವ್ಯಕ್ತಿಗೆ ಅಂಥ ವ್ಯಕ್ತಿ ಅನುರೂಪನಾಗಿದ್ದಾನೆಂದು, ಸಂದರ್ಭಾನುಸಾರ, ಪ್ರಿಸೈಡಿಂಗ್ ಆಫೀಸರ್ ಅವರಿಗೆ ಅಥವಾ ಪೋಲಿಂಗ್ ಆಫೀಸರ್‌ರವರಿಗೆ ಮನದಟ್ಟಾದರೆ, ಅವರು ಅಂಥ ನಮೂದನೆಯಲ್ಲಿನ ಲಿಪಿಕ ಅಥವಾ ಮುದ್ರಣ ದೋಷಗಳನ್ನು ಕಡೆಗಣಿಸಬಹುದು.

**93. ಚುನಾವಣಾ ಕರ್ತವ್ಯದ ಮೇಲಿರುವ ಸರ್ಕಾರಿ ನೌಕರರಿಗೆ ಸೌಲಭ್ಯಗಳು.–** (1) 92ನೇ ನಿಯಮದ ಉಪಬಂಧಗಳು, ನಮೂನೆ 20ರಲ್ಲಿ ಚುನಾವಣಾ ಕರ್ತವ್ಯ ಪ್ರಮಾಣಪತ್ರವನ್ನು ಮತಗಟ್ಟೆಯಲ್ಲಿ ಹಾಜರುಪಡಿಸುವ ಮತ್ತು ಆ ಮತಗಟ್ಟೆಯು ಆತನು ಮತ ಚಲಾಯಿಸಲು ಹಕ್ಕುಳ್ಳ ಮತಗಟ್ಟೆಗಿಂತ ಬೇರೆಯದಾಗಿದ್ದರೂ ಸಹ ಅದರಲ್ಲಿ ತನ್ನ ಮತ ಚಲಾಯಿಸಲು ಅನುಮತಿ ಕೋರುವ ಯಾರೇ ವ್ಯಕ್ತಿಗೆ ಅನ್ವಯವಾಗತಕ್ಕದ್ದಲ್ಲ.

(2) ಅಂಥ ಪ್ರಮಾಣ ಪತ್ರವನ್ನು ಹಾಜರುಪಡಿಸಿದ ಮೇಲೆ, ಪ್ರಿಸೈಡಿಂಗ್ ಆಫೀಸರ್ ಅವರು,–

(ಎ) ಅದರ ಮೇಲೆ, ಅದನ್ನು ಹಾಜರುಪಡಿಸುವ ವ್ಯಕ್ತಿಯ ರುಜುವನ್ನು ಪಡೆದುಕೊಳ್ಳತಕ್ಕದ್ದು;

(ಬಿ) ಪ್ರಮಾಣ ಪತ್ರದಲ್ಲಿ ತಿಳಿಸಿರುವಂತೆ ಆ ವ್ಯಕ್ತಿಯ ಹೆಸರನ್ನು ಮತ್ತು ಮತದಾರರ ಪಟ್ಟಿಯಲ್ಲಿನ ಸಂಖ್ಯೆಯನ್ನು ಮತದಾರರ ಪಟ್ಟಿಯ ಗುರುತು ಮಾಡಿದ ಪ್ರತಿಯ ಕೊನೆಯಲ್ಲಿ ನಮೂದಿಸತಕ್ಕದ್ದು; ಮತ್ತು

(ಸಿ) ಒಬ್ಬ ಮತದಾರನು ಆ ಮತಗಟ್ಟೆಯಲ್ಲಿ ಮತ ಹಾಕಲು ಹಕ್ಕುಹೊಂದಿರುವ ರೀತಿಯಲ್ಲಿಯೇ ಆತನು ತನ್ನ ಮತ ಚಲಾಯಿಸಲು ಆತನಿಗೆ ಅನುಮತಿ ನೀಡತಕ್ಕದ್ದು.

**94. ಗುರುತನ್ನು ಆಕ್ಷೇಪಿಸುವುದು.**– (1) ಒಬ್ಬ ನಿರ್ದಿಷ್ಟ ಮತದಾರನೆಂದು ಹೇಳುವ ಒಬ್ಬ ವ್ಯಕ್ತಿಯ ಗುರುತನ್ನು ಆಕ್ಷೇಪಿಸುವ ಯಾರೇ ಪೋಲಿಂಗ್ ಏಜೆಂಟನು, ಅಂಥ ಪ್ರತಿಯೊಂದು ಆಕ್ಷೇಪಣೆಗಾಗಿ, ಪ್ರಿಸೈಡಿಂಗ್ ಆಫೀಸರ್ ಅವರ ಬಳಿ, ಮೊದಲು ನಗದಾಗಿ ಎರಡು ರೂಪಾಯಿ ಕಟ್ಟಿ ಹಾಗೆ ಆಕ್ಷೇಪಿಸಬಹುದು.

(2) ಹಾಗೆ ಠೇವಣಿ ಇಟ್ಟ ಮೇಲೆ, ಪ್ರಿಸೈಡಿಂಗ್ ಆಫೀಸರ್‌ರವರು,–

(ಎ) ಆಕ್ಷೇಪಕ್ಕೆ ಗುರಿಯಾದ ವ್ಯಕ್ತಿಗೆ ಮತ್ತೊಬ್ಬನಂತೆ ವರ್ತಿಸಿದರೆ ವಿಧಿಸುವ ದಂಡನೆ ಬಗ್ಗೆ ಎಚ್ಚರಿಕೆ ನೀಡತಕ್ಕದ್ದು;

(ಬಿ) ಮತದಾರರ ಪಟ್ಟಿಯಲ್ಲಿನ ಸಂಬಂಧಪಟ್ಟ ನಮೂದನ್ನು ಪೂರ್ಣವಾಗಿ ಓದಿ ಹೇಳತಕ್ಕದ್ದು ಮತ್ತು ಆತನು ಅದರಲ್ಲಿ ಉಲ್ಲೇಖಿಸಿರುವ ವ್ಯಕ್ತಿಯೇ ಎಂದು ಅವನನ್ನು ಕೇಳತಕ್ಕದ್ದು;

(ಸಿ) ಆತನ ಹೆಸರು ಮತ್ತು ವಿಳಾಸವನ್ನು ನಮೂನೆ 25ರಲ್ಲಿರುವ ಆಕ್ಷೇಪಿತ ಮತಗಳ ಪಟ್ಟಿಯಲ್ಲಿ ನಮೂದಿಸತಕ್ಕದ್ದು; ಮತ್ತು

(ಡಿ) ಸದರಿ ಪಟ್ಟಿಯಲ್ಲಿ ಸಹಿ ಹಾಕುವಂತೆ ಆತನನ್ನು ಅಗತ್ಯಪಡಿಸತಕ್ಕದ್ದು.

(3) ಆ ತರುವಾಯ, ಪ್ರಿಸೈಡಿಂಗ್ ಆಫೀಸರ್ ಅವರು ಆ ಆಕ್ಷೇಪಣೆಯ ಬಗ್ಗೆ ಒಂದು ಸಂಕ್ಷಿಪ್ತ ವಿಚಾರಣೆ ನಡೆಸತಕ್ಕದ್ದು ಮತ್ತು ಆ ಉದ್ದೇಶಕ್ಕಾಗಿ,–

(ಎ) ಆ ಆಕ್ಷೇಪಣೆದಾರನು ಆಕ್ಷೇಪಣೆಯ ಸಮರ್ಥನೆಗಾಗಿ ಸಾಕ್ಷ್ಯ ಒದಗಿಸುವಂತೆ ಮತ್ತು ಆಕ್ಷೇಪಕ್ಕೆ ಗುರಿಯಾದ ವ್ಯಕ್ತಿಗೆ ಆತನ ಗುರುತಿನ ರುಜುವಾತಾಗಿ ಸಾಕ್ಷ್ಯ ಒದಗಿಸುವಂತೆ ಅಗತ್ಯಪಡಿಸಬಹುದು;

(ಬಿ) ಆಕ್ಷೇಪಕ್ಕೆ ಗುರಿಯಾದ ವ್ಯಕ್ತಿಯ ಗುರುತನ್ನು ನಿರೂಪಿಸುವ ಸಲುವಾಗಿ ಅಗತ್ಯವಿರುವ ಯಾವುವೇ ಪ್ರಶ್ನೆಗಳನ್ನು ಆಕ್ಷೇಪಕ್ಕೆ ಗುರಿಯಾದ ವ್ಯಕ್ತಿಗೆ ಹಾಕಬಹುದು ಮತ್ತು ಅವನು ಪ್ರಮಾಣ ಮಾಡಿ ಉತ್ತರಿಸುವಂತೆ ಅವನನ್ನು ಅಗತ್ಯಪಡಿಸಬಹುದು; ಮತ್ತು

(ಸಿ) ಆಕ್ಷೇಪಕ್ಕೆ ಗುರಿಯಾದ ವ್ಯಕ್ತಿಗೆ ಮತ್ತು ಸಾಕ್ಷ್ಯವನ್ನು ನೀಡಲು ಬಂದ ಯಾರೇ ವ್ಯಕ್ತಿಗೆ ಪ್ರಮಾಣವಚನವನ್ನು ಬೋಧಿಸಬಹುದು.

(4) ವಿಚಾರಣೆಯ ತರುವಾಯ, ಪ್ರಿಸೈಡಿಂಗ್ ಆಫೀಸರ್‌ರವರು ಆಕ್ಷೇಪಣೆಯು ಸಾಬೀತಾಗಲಿಲ್ಲವೆಂದು ಪರಿಗಣಿಸಿದರೆ, ಅವರು ಆಕ್ಷೇಪಕ್ಕೆ ಗುರಿಯಾದ ವ್ಯಕ್ತಿಗೆ ಮತ ಚಲಾಯಿಸಲು ಅವಕಾಶ ನೀಡತಕ್ಕದ್ದು; ಮತ್ತು ಆಕ್ಷೇಪಣೆ ಸಾಬೀತಾಗಿದೆ ಎಂದು ಅವರು ಪರಿಗಣಿಸಿದರೆ, ಅವರು ಆಕ್ಷೇಪಕ್ಕೆ ಗುರಿಯಾದ ವ್ಯಕ್ತಿಯನ್ನು ಮತ ಚಲಾಯಿಸದಂತೆ ಹೊರಹಾಕತಕ್ಕದ್ದು.

(5) ಆಕ್ಷೇಪಣೆಯು ಕ್ಷುಲ್ಲಕವಾದುದು ಅಥವಾ ಅದನ್ನು ಸದ್ಭಾವನೆಯಿಂದ ಮಾಡಿರುವುದಲ್ಲ ಎಂದು ಪ್ರಿಸೈಡಿಂಗ್ ಆಫೀಸರ್‌ರವರು ಅಭಿಪ್ರಾಯಪಟ್ಟರೆ, ಅವರು (1)ನೇ ಉಪನಿಯಮದ ಅಡಿಯಲ್ಲಿ ಇಡಲಾದ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ನಿರ್ದೇಶಿಸತಕ್ಕದ್ದು ಮತ್ತು ಇತರ ಯಾವುದೇ ಪ್ರಕರಣದಲ್ಲಿ, ವಿಚಾರಣೆಯು ಮುಕ್ತಾಯವಾದ ತರುವಾಯ ಆಕ್ಷೇಪಣೆದಾರನಿಗೆ ಅದನ್ನು ವಾಪಸ್ಸು ಮಾಡತಕ್ಕದ್ದು.

**95. ಮತ್ತೊಬ್ಬರಂತೆ ವರ್ತಿಸುವುದರ ವಿರುದ್ಧ ಸುರಕ್ಷಾ ಕ್ರಮಗಳು.**– (1) ಯಾವ ಮತದಾರನ ಗುರುತಿನ ಬಗ್ಗೆ ಸಂದರ್ಭಾನುಸಾರ ಪ್ರಿಸೈಡಿಂಗ್ ಆಫೀಸರ್ ಅಥವಾ ಪೋಲಿಂಗ್ ಆಫೀಸರ್ ಅವರು ಮನದಟ್ಟು ಮಾಡಿಕೊಂಡಿರುವರೋ ಆ ಪ್ರತಿಯೊಬ್ಬ ಮತದಾರನು, ಪ್ರಿಸೈಡಿಂಗ್ ಆಫೀಸರ್ ಅಥವಾ ಪೋಲಿಂಗ್ ಆಫೀಸರ್ ಅವರಿಗೆ ತನ್ನ ಎಡ ತೋರುಬೆರಳನ್ನು ಪರೀಕ್ಷಿಸಲು ಮತ್ತು ಅದರ ಮೇಲೆ ಅಳಿಸಲಾಗದ ಶಾಯಿ ಹಾಕಲು ಅವಕಾಶ ನೀಡತಕ್ಕದ್ದು.

(2) ಯಾರೇ ಮತದಾರನು,–

(ಎ) (1)ನೇ ಉಪನಿಯಮದ ಪ್ರಕಾರ ತನ್ನ ಎಡ ತೋರುಬೆರಳನ್ನು ಪರೀಕ್ಷಿಸಲು ಅಥವಾ ಅದರ ಮೇಲೆ ಗುರುತು ಮಾಡಲು ಅವಕಾಶ ನೀಡದಿದ್ದರೆ ಅಥವಾ ಆತನ ಎಡ ತೋರುಬೆರಳಿನಲ್ಲಿ ಈಗಾಗಲೇ ಗುರುತು ಹೊಂದಿದ್ದರೆ ಅಥವಾ ಶಾಯಿ ಗುರುತನ್ನು ಅಳಿಸಿ ಹಾಕುವ ಯಾವುದೇ ಕೃತ್ಯ ನಡೆಸಿದರೆ; ಅಥವಾ

(ಬಿ) 92ನೇ ನಿಯಮದ (3)ನೇ ಉಪನಿಯಮದ ಮೂಲಕ ಅಗತ್ಯಪಡಿಸಿದಂತೆ ತನ್ನ ಗುರುತಿನ ಚೀಟಿಯನ್ನು ಹಾಜರುಪಡಿಸಲು ತಪ್ಪಿದರೆ ಅಥವಾ ನಿರಾಕರಿಸಿದರೆ

– ಆತನಿಗೆ ಮತ ಚಲಾಯಿಸಲು ಅವಕಾಶ ನೀಡತಕ್ಕದ್ದಲ್ಲ.

(3) ಒಂದು ಲೋಕಸಭಾ ಕ್ಷೇತ್ರಕ್ಕೆ ಅಥವಾ ವಿಧಾನಸಭಾ ಕ್ಷೇತ್ರಕ್ಕೆ ಮತ್ತು ಒಂದು ವಾರ್ಡ್‌ಗೆ ಏಕಕಾಲದಲ್ಲಿ ಚುನಾವಣೆ ನಡೆದಿರುವಾಗ, ಅಂಥ ಒಂದು ಚುನಾವಣೆಯಲ್ಲಿ ಎಡ ತೋರುಬೆರಳಿನಲ್ಲಿ ಅಳಿಸಲಾಗದ ಶಾಯಿ ಗುರುತನ್ನು ಹಾಕಲಾಗಿರುವ ಅಥವಾ ತನ್ನ ಗುರುತಿನ ಚೀಟಿಯನ್ನು ಹಾಜರುಪಡಿಸಿರುವ ಒಬ್ಬ ಮತದಾರನಿಗೆ (1)ನೇ ಮತ್ತು (2)ನೇ ಉಪನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ, ಇನ್ನೊಂದು ಚುನಾವಣೆಯಲ್ಲಿ ತನ್ನ ಮತ ಚಲಾಯಿಸಲು ಅವಕಾಶ ನೀಡತಕ್ಕದ್ದು.

(4) ಒಬ್ಬ ಮತದಾರನು ಎಡ ತೋರುಬೆರಳನ್ನು ಹೊಂದಿಲ್ಲದಿರುವಾಗ, ಈ ನಿಯಮದಲ್ಲಿ ಒಬ್ಬ ಮತದಾರನ ಎಡ ತೋರುಬೆರಳಿಗೆ ಮಾಡಿದ ಯಾವುದೇ ಉಲ್ಲೇಖವನ್ನು, ಆತನ ಎಡಗೈನ ಇತರ ಯಾವುದೇ ಬೆರಳಿಗೆ ಮಾಡಿದ ಉಲ್ಲೇಖವೆಂದು ಅರ್ಥೈಸತಕ್ಕದ್ದು, ಮತ್ತು ಆತನ ಎಲ್ಲಾ ಎಡಗೈ ಬೆರಳುಗಳು ಇಲ್ಲದಿರುವಾಗ, ಆತನ ಬಲಗೈ ತೋರುಬೆರಳಿಗೆ ಅಥವಾ ಇತರ ಯಾವುದೇ ಬೆರಳಿಗೆ ಮಾಡಿದ ಉಲ್ಲೇಖವೆಂದು ಅರ್ಥೈಸತಕ್ಕದ್ದು, ಮತ್ತು ಆತನ ಎರಡೂ ಕೈಗಳಲ್ಲಿ ಎಲ್ಲ ಬೆರಳುಗಳೂ ಇಲ್ಲದಿರುವಾಗ ಆತನು ಹೊಂದಿರುವ ಎಡ ಅಥವಾ ಬಲಗೈಗಳ ಅತ್ಯಂತ ತುದಿಯ ಭಾಗಕ್ಕೆ ಮಾಡಿದ ಉಲ್ಲೇಖವೆಂದು ಅರ್ಥೈಸತಕ್ಕದ್ದು.

**96. ಮತಯಂತ್ರಗಳ ಮೂಲಕ ಮತ ಚಲಾಯಿಸುವ ಪ್ರಕ್ರಿಯೆ.–** (1) ಒಬ್ಬ ಮತದಾರನಿಗೆ ಮತ ಚಲಾಯಿಸಲು ಅನುಮತಿಸುವುದಕ್ಕೆ ಮೊದಲು, ಪೋಲಿಂಗ್ ಆಫೀಸರ್‌ರವರು,–

(ಎ) ಮತದಾರರ ಅಧಿಕೃತ ಪಟ್ಟಿಯ ಪ್ರತಿಯಲ್ಲಿ ನಮೂದಿಸಿರುವಂತೆ ಮತದಾರನ ಮತದಾರ ಪಟ್ಟಿಯ ಕ್ರಮ ಸಂಖ್ಯೆಯನ್ನು, ನಮೂನೆ 38ರಲ್ಲಿರುವ ಮತದಾರರ ರಿಜಿಸ್ಟರಿನಲ್ಲಿ ನಮೂದಿಸತಕ್ಕದ್ದು.

(ಬಿ) ಸದರಿ ಮತದಾರರ ರಿಜಿಸ್ಟರಿನಲ್ಲಿ ಮತದಾರನ ಸಹಿಯನ್ನು ಅಥವಾ ಹೆಬ್ಬೆರಳು ಗುರುತನ್ನು ಪಡೆದುಕೊಳ್ಳತಕ್ಕದ್ದು; ಮತ್ತು

(ಸಿ) ಮತದಾರನಿಗೆ ಮತ ಚಲಾಯಿಸಲು ಅವಕಾಶ ನೀಡಿರುವುದನ್ನು ಸೂಚಿಸಲು ಮತದಾರನ ಹೆಸರನ್ನು ಮತದಾರರ ಅಧಿಕೃತ ಪಟ್ಟಿಯ ಪ್ರತಿಯಲ್ಲಿ ಗುರುತು ಮಾಡತಕ್ಕದ್ದು:

ಪರಂತು, ಯಾರೇ ಮತದಾರನು ಮತದಾರರ ರಿಜಿಸ್ಟರಿನಲ್ಲಿ ತನ್ನ ಸಹಿಯನ್ನು ಅಥವಾ ಹೆಬ್ಬೆರಳು ಗುರುತನ್ನು ಹಾಕಿದ ಹೊರತು ಮತ ಚಲಾಯಿಸಲು ಆತನಿಗೆ ಅವಕಾಶ ನೀಡತಕ್ಕದ್ದಲ್ಲ.

(2) (1)ನೇ ಉಪನಿಯಮದಲ್ಲಿ ಏನೇ ಒಳಗೊಂಡಿದ್ದಾಗ್ಯೂ, ಯಾರೇ ಪ್ರಿಸೈಡಿಂಗ್ ಆಫೀಸರ್ ಅಥವಾ ಪೋಲಿಂಗ್ ಆಫೀಸರ್ ಅಥವಾ ಇತರ ಯಾರೇ ಅಧಿಕಾರಿಯು ಮತದಾರರ ರಿಜಿಸ್ಟರಿನಲ್ಲಿ ಮತದಾರರ ಹೆಬ್ಬೆರಳು ಗುರುತನ್ನು ದೃಢೀಕರಿಸುವುದು ಅವಶ್ಯವಾಗಿರತಕ್ಕದ್ದು.

**97. ಮತಗಟ್ಟೆಯೊಳಗೆ ಮತದಾರರು ಮತದಾನದ ರಹಸ್ಯ ಕಾಪಾಡುವುದು ಮತ್ತು ಮತದಾನದ ಪ್ರಕ್ರಿಯೆಗಳು.–** (1) 96ನೇ ನಿಯಮದ ಅಡಿಯಲ್ಲಿ ಮತ ಚಲಾಯಿಸಲು ಅನುಮತಿಸಲಾಗಿರುವ ಪ್ರತಿಯೊಬ್ಬ ಮತದಾರನು ಮತಗಟ್ಟೆಯೊಳಗೆ ಮತದಾನದ ರಹಸ್ಯವನ್ನು ಕಾಪಾಡತಕ್ಕದ್ದು ಮತ್ತು ಆ ಉದ್ದೇಶಕ್ಕಾಗಿ ಈ ಮುಂದೆ ನಿರ್ದಿಷ್ಟಪಡಿಸಿರುವ ಮತದಾನದ ಪ್ರಕ್ರಿಯೆಯನ್ನು ಪಾಲಿಸತಕ್ಕದ್ದು.

(2) ಮತ ಹಾಕಲು ಅನುಮತಿ ನೀಡಿದ ತಕ್ಷಣವೇ ಮತದಾರನು ಪ್ರಿಸೈಡಿಂಗ್ ಆಫೀಸರ್ ಅವರ ಅಥವಾ ಮತ ಯಂತ್ರದ ಕಂಟ್ರೋಲ್ ಯೂನಿಟಿನ ಪ್ರಭಾರದಲ್ಲಿರುವ ಪೋಲಿಂಗ್ ಆಫೀಸರ್ ಅವರ ಬಳಿ ಹೋಗತಕ್ಕದ್ದು. ಅವರು ಕಂಟ್ರೋಲ್ ಯೂನಿಟಿನ ಮೇಲಿನ ಸಂಬಂಧಪಟ್ಟ ಬಟನ್ ಒತ್ತುವ ಮೂಲಕ, ಮತದಾರನ ಮತವನ್ನು ದಾಖಲು ಮಾಡುವ ಸಲುವಾಗಿ ಬ್ಯಾಲೆಟಿಂಗ್ ಯೂನಿಟ್ ಅನ್ನು ಸಕ್ರಿಯಗೊಳಿಸತಕ್ಕದ್ದು.

(3) ಮತದಾರನು ಆ ತರುವಾಯ, ತಕ್ಷಣವೇ–

(ಎ) ವೋಟಿಂಗ್ ಕಂಪಾರ್ಟ್‌ಮೆಂಟ್‌ಗೆ ಹೋಗಬೇಕು;

(ಬಿ) ಆತನು/ಆಕೆಯು ತನ್ನ ಮತವನ್ನು ಯಾರಿಗೆ ನೀಡಲು ಉದ್ದೇಶಿಸಿರುವನೋ/ಳೋ ಆ ಉಮೇದುವಾರನ ಹೆಸರು ಮತ್ತು ಚಿಹ್ನೆಯ ಎದುರಿನಲ್ಲಿ ಬ್ಯಾಲೆಟಿಂಗ್ ಯೂನಿಟಿನ ಮೇಲೆ ಇರುವ ಬಟನ್ ಒತ್ತುವ ಮೂಲಕ ತನ್ನ ಮತವನ್ನು ದಾಖಲು ಮಾಡಬೇಕು.

(ಸಿ) ವೋಟಿಂಗ್ ಕಂಪಾರ್ಟ್‌ಮೆಂಟ್‌ನಿಂದ ಹೊರ ಬರಬೇಕು ಮತ್ತು ಮತಗಟ್ಟೆಯಿಂದ ನಿರ್ಗಮಿಸಬೇಕು.

(4) ಪ್ರತಿಯೊಬ್ಬ ಮತದಾರನೂ ಅನುಚಿತ ವಿಳಂಬ ಮಾಡದೇ ಮತ ಚಲಾಯಿಸಬೇಕು.

(5) ಯಾರೇ ಒಬ್ಬ ಮತದಾರನು ವೋಟಿಂಗ್ ಕಂಪಾರ್ಟ್‌ಮೆಂಟ್‌ನಲ್ಲಿರುವಾಗ ಮತ್ತೊಬ್ಬ ಮತದಾರನು–

– ಅದರೊಳಗೆ ಹೋಗಲು ಅನುಮತಿಸತಕ್ಕದ್ದಲ್ಲ.

(6) 96ನೇ ನಿಯಮದ ಅಥವಾ 100ನೇ ನಿಯಮದ ಅಡಿಯಲ್ಲಿ ಮತ ಚಲಾಯಿಸಲು ಅನುಮತಿಸಲಾಗಿರುವ ಒಬ್ಬ ಮತದಾರನು, ಪ್ರಿಸೈಡಿಂಗ್ ಆಫೀಸರ್ ಅವರು ಎಚ್ಚರಿಕೆ ನೀಡಿದ ಮೇಲೂ, (3)ನೇ ಉಪನಿಯಮದಲ್ಲಿ ನಿರ್ದಿಷ್ಟಪಡಿಸಲಾಗಿರುವ ಪ್ರಕ್ರಿಯೆಯನ್ನು ಪಾಲಿಸಲು ನಿರಾಕರಿಸಿದರೆ, ಪ್ರಿಸೈಡಿಂಗ್ ಆಫೀಸರ್‌ರವರು ಅಥವಾ ಪ್ರಿಸೈಡಿಂಗ್ ಆಫೀಸರ್‌ರವರ ನಿರ್ದೇಶನದ ಮೇರೆಗೆ ಒಬ್ಬ ಪೋಲಿಂಗ್ ಆಫೀಸರ್‌ರವರು ಅಂಥ ಮತದಾರನಿಗೆ ಮತ ಹಾಕಲು ಅವಕಾಶ ನೀಡತಕ್ಕದ್ದಲ್ಲ.

(7) (6)ನೇ ಉಪ ನಿಯಮದ ಅಡಿಯಲ್ಲಿ ಒಬ್ಬ ಮತದಾರನಿಗೆ ಮತ ಚಲಾಯಿಸಲು ಅವಕಾಶ ನೀಡದಿರುವಾಗ, ಅ ಬಗ್ಗೆ, ಪ್ರಿಸೈಡಿಂಗ್ ಆಫೀಸರ್‌ರವರು ನಮೂನೆ 38ರಲ್ಲಿರುವ ಮತದಾರರ ರಿಜಿಸ್ಟರಿನಲ್ಲಿ ಮತದಾರನ ಹೆಸರಿನ ಎದುರಿನಲ್ಲಿ, ಮತದಾನದ ಪ್ರಕ್ರಿಯೆಯನ್ನು ಉಲ್ಲಂಘಿಸಲಾಗಿದೆಯೆಂಬ ಒಂದು ಷರಾ ಬರೆದು ಸಹಿ ಹಾಕತಕ್ಕದ್ದು.

**98. ಅಂಧ ಅಥವಾ ದುರ್ಬಲ ಮತದಾರರ ಮತಗಳ ದಾಖಲಾತಿ.–** (1) ಅಂಧನಾಗಿರುವ ಅಥವಾ ಇತರ ದೈಹಿಕ ದುರ್ಬಲತೆಗಳ ಕಾರಣದಿಂದಾಗಿ ಒಬ್ಬ ಮತದಾರನು ಮತಯಂತ್ರದ ಬ್ಯಾಲೆಟಿಂಗ್ ಯೂನಿಟಿನ ಮೇಲಿನ ಚಿಹ್ನೆಯನ್ನು ಗುರುತಿಸಲು ಅಸಮರ್ಥನಾಗಿದ್ದಾನೆ ಅಥವಾ ಇತರರ ನೆರವಿಲ್ಲದೆ ಅದರ ಮೇಲಿನ ಸಂಬಂಧಪಟ್ಟ ಬಟನ್ ಒತ್ತುವ ಮೂಲಕ ತನ್ನ ಮತ ದಾಖಲು ಮಾಡಲು ಅಸಮರ್ಥನಾಗಿದ್ದಾನೆ ಎಂದು ಪ್ರಿಸೈಡಿಂಗ್ ಆಫೀಸರ್ ಅವರಿಗೆ ಮನದಟ್ಟಾದರೆ, ಪ್ರಿಸೈಡಿಂಗ್ ಆಫೀಸರ್‌ರವರು ಮತದಾರನು ತನ್ನ ಜೊತೆಗೆ, ತನ್ನ ಪರವಾಗಿ ಮತ್ತು ತನ್ನ ಇಚ್ಛೆಗನುಸಾರವಾಗಿ ಮತ ದಾಖಲು ಮಾಡಲು ವೋಟಿಂಗ್ ಕಂಪಾರ್ಟ್‌ಮೆಂಟ್‌ಗೆ ಹದಿನೆಂಟು ವರ್ಷಗಳಿಗೆ ಕಡಿಮೆಯಿಲ್ಲದ ಒಬ್ಬ ಸಂಗಡಿಗನನ್ನು ಕರೆದುಕೊಂಡು ಹೋಗಲು ಅನುಮತಿಸತಕ್ಕದ್ದು:

ಪರಂತು, ಯಾರೇ ವ್ಯಕ್ತಿಯು ಒಂದೇ ದಿನ ಯಾವುದೇ ಮತಗಟ್ಟೆಯಲ್ಲಿ ಒಬ್ಬನಿಗಿಂತ ಹೆಚ್ಚು ಮತದಾರರ ಸಂಗಡಿಗನಾಗಿ ಕಾರ್ಯನಿರ್ವಹಿಸಲು ಅನುಮತಿ ನೀಡತಕ್ಕದ್ದಲ್ಲ:

ಮತ್ತೂ ಪರಂತು, ಈ ನಿಯಮದ ಅಡಿಯಲ್ಲಿ ಯಾವುದೇ ದಿನ ಒಬ್ಬ ಮತದಾರನ ಸಂಗಡಿಗನಾಗಿ ಕಾರ್ಯನಿರ್ವಹಿಸಲು ಯಾರೇ ವ್ಯಕ್ತಿಗೆ ಅನುಮತಿ ನೀಡುವ ಮೊದಲು, ಆತನು ಮತದಾರನ ಪರವಾಗಿ ದಾಖಲು ಮಾಡಿದ ಮತದ ರಹಸ್ಯವನ್ನು ಕಾಪಾಡುವುದಾಗಿ ಮತ್ತು ಆತನು ಆ ದಿನ ಇತರ ಯಾವುದೇ ಮತಗಟ್ಟೆಯಲ್ಲಿ ಇತರ ಯಾರೇ ಮತದಾರನ ಸಂಗಡಿಗನಾಗಿ ಈಗಾಗಲೇ ಕಾರ್ಯನಿರ್ವಹಿಸಿಲ್ಲವೆಂಬುದಾಗಿ ಘೋಷಣೆ ನೀಡುವಂತೆ ಅಗತ್ಯಪಡಿಸತಕ್ಕದ್ದು.

(2)ಪ್ರಿಸೈಡಿಂಗ್ ಆಫೀಸರ್‌ರವರು ಈ ನಿಯಮದ ಅಡಿಯಲ್ಲಿನ ಎಲ್ಲ ಪ್ರಕರಣಗಳ ಬಗ್ಗೆ ನಮೂನೆ 26ರಲ್ಲಿ ಒಂದು ದಾಖಲೆಯನ್ನು ಇಡತಕ್ಕದ್ದು.

**99. ಮತದಾರನು ಮತ ಚಲಾಯಿಸದಿರಲು ನಿರ್ಧರಿಸುವುದು.–** ಒಬ್ಬ ಮತದಾರನು, ಮತದಾರರ ಪಟ್ಟಿಯಲ್ಲಿನ ಅವನ ಸಂಖ್ಯೆಯನ್ನು ನಮೂನೆ 38ರಲ್ಲಿರುವ ಮತದಾರರ ರಿಜಿಸ್ಟರಿನಲ್ಲಿ ವಿಧ್ಯುಕ್ತವಾಗಿ ನಮೂದಿಸಿದ ಮೇಲೆ ಮತ್ತು 96ನೇ ನಿಯಮದ (1)ನೇ ಉಪ ನಿಯಮದ ಅಡಿಯಲ್ಲಿ ಅಗತ್ಯಪಡಿಸಲಾದಂತೆ ಅದರ ಮೇಲೆ ತನ್ನ ಸಹಿ ಅಥವಾ ಹೆಬ್ಬೆರಳು ಗುರುತನ್ನು ಹಾಕಿದ ಮೇಲೆ, ತನ್ನ ಮತವನ್ನು ಚಲಾಯಿಸದಿರಲು ನಿರ್ಧರಿಸಿದರೆ, ಪ್ರಿಸೈಡಿಂಗ್ ಆಫೀಸರ್‌ರವರು ಈ ಬಗ್ಗೆ ನಮೂನೆ 38ರಲ್ಲಿ ಸದರಿ ನಮೂದಿನ ಎದುರಿನಲ್ಲಿ ಒಂದು ಷರಾ ಬರೆಯತಕ್ಕದ್ದು ಮತ್ತು ಅಂಥ ಷರಾದ ಎದುರು ಆ ಮತದಾರನ ಸಹಿಯನ್ನು ಅಥವಾ ಹೆಬ್ಬೆರಳು ಗುರುತನ್ನು ಪಡೆದುಕೊಳ್ಳತಕ್ಕದ್ದು.

**100. ಟೆಂಡರ್ಡ್ ಮತಗಳು.–** (1) ಒಬ್ಬ ನಿರ್ದಿಷ್ಟ ಮತದಾರನೆಂದು ಈಗಾಗಲೇ ಬೇರೊಬ್ಬ ವ್ಯಕ್ತಿಯು ಮತ ಚಲಾಯಿಸಿ ಹೋದ ಮೇಲೆ, ಒಬ್ಬ ವ್ಯಕ್ತಿಯು ತಾನೇ ಆ ನಿರ್ದಿಷ್ಟ ಮತದಾರನೆಂದು ಹೇಳಿಕೊಂಡು ಮತ ಚಲಾಯಿಸಲು ಕೋರಿದರೆ, ಆತನು, ಪ್ರಿಸೈಡಿಂಗ್ ಆಫೀಸರ್‌ರವರು ತನ್ನ ಗುರುತಿಗೆ ಸಂಬಂಧಿಸಿದಂತೆ ಕೇಳುವಂಥ ಪ್ರಶ್ನೆಗಳಿಗೆ ತೃಪ್ತಿಕರವಾಗಿ ಉತ್ತರ ಹೇಳಿದ ಮೇಲೆ, ಆತನಿಗೆ ಬ್ಯಾಲೆಟಿಂಗ್ ಯೂನಿಟಿನ ಮೂಲಕ ಮತ ಹಾಕಲು ಅನುಮತಿಸುವ ಬದಲಾಗಿ, ಆತನಿಗೆ ಮತ ಚಲಾಯಿಸಲು ಒಂದು ಟೆಂಡರ್ಡ್ ಮತಪತ್ರವನ್ನು ನೀಡತಕ್ಕದ್ದು. ಸದರಿ ಟೆಂಡರ್ಡ್ ಮತ ಪತ್ರವು ಚುನಾವಣಾ ಆಯೋಗವು ನಿರ್ದಿಷ್ಟಪಡಿಸುವಂಥ ವಿನ್ಯಾಸದಲ್ಲಿರತಕ್ಕದ್ದು ಮತ್ತು ಅದರಲ್ಲಿನ ವಿವರಗಳು ಕನ್ನಡದಲ್ಲಿರತಕ್ಕದ್ದು ಅಥವಾ ಆಯೋಗವು ನಿರ್ದಿಷ್ಟಪಡಿಸುವಂಥ ಇತರ ಭಾಷೆಗಳಲ್ಲಿರತಕ್ಕದ್ದು.

(2) ಟೆಂಡರ್ಡ್ ಮತಪತ್ರ ಒದಗಿಸುವುದಕ್ಕೆ ಮೊದಲು ಅಂಥ ಪ್ರತಿಯೊಬ್ಬ ಮತದಾರನು ನಮೂನೆ 27–ಎ(ಇವಿಎಂ)ನಲ್ಲಿ ತನಗೆ ಸಂಬಂಧಿಸಿದ ನಮೂದುಗಳ ಎದುರಿನಲ್ಲಿ ತನ್ನ ಹೆಸರನ್ನು ಬರೆಯತಕ್ಕದ್ದು.

(3) ಮತಪತ್ರ ಸ್ವೀಕರಿಸಿದ ಮೇಲೆ ಆತನು ತಕ್ಷಣವೇ,–

(ಎ) ವೋಟಿಂಗ್ ಕಂಪಾರ್ಟ್‌ಮೆಂಟ್‌ಗೆ ತೆರಳತಕ್ಕದ್ದು.

(ಬಿ) ಮತಪತ್ರದಲ್ಲಿ ತಾನು ಮತ ಹಾಕಲು ಇಚ್ಛಿಸುವ ಉಮೇದುವಾರರ ಚಿಹ್ನೆಯ ಮೇಲೆ ಅಥವಾ ಅದರ ಸಮೀಪ ಆ ಉದ್ದೇಶಕ್ಕಾಗಿ ನೀಡಲಾಗಿರುವ ಸಾಧನದ ಅಥವಾ ಉಪಕರಣದ ಸಹಾಯದಿಂದ ಒಂದು ಅಡ್ಡ ಗುರುತು **'X'** ಹಾಕುವ ಮೂಲಕ ತನ್ನ ಮತ ದಾಖಲು ಮಾಡತಕ್ಕದ್ದು.

(ಸಿ) ತಾನು ಹಾಕಿದ ಮತವು ಕಾಣಿಸದ ರೀತಿಯಲ್ಲಿ ಮತಪತ್ರವನ್ನು ಮಡಿಸತಕ್ಕದ್ದು.

(ಡಿ) ಅಗತ್ಯಪಡಿಸಿದರೆ ಪ್ರಿಸೈಡಿಂಗ್ ಆಫೀಸರ್‌ರವರಿಗೆ ಮತಪತ್ರದ ಮೇಲಿನ ವಿಭಿನ್ನತಾ ಗುರುತನ್ನು ತೋರಿಸತಕ್ಕದ್ದು.

(ಇ) ಅದನ್ನು ಪ್ರಿಸೈಡಿಂಗ್ ಆಫೀಸರ್‌ರವರಿಗೆ ನೀಡತಕ್ಕದ್ದು. ಅವರು ಆ ಉದ್ದೇಶಕ್ಕಾಗಿ ಇಡಲಾಗಿರುವ ಲಕೋಟೆಯಲ್ಲಿ ಅದನ್ನು ಇಡತಕ್ಕದ್ದು.

(ಎಫ್) ಮತಗಟ್ಟೆಯಿಂದ ನಿರ್ಗಮಿಸತಕ್ಕದ್ದು.

(4) ಅಂಧನಾಗಿರುವ ಅಥವಾ ದೈಹಿಕವಾಗಿ ದುರ್ಬಲನಾಗಿರುವ ಕಾರಣದಿಂದಾಗಿ, ಅಂಥ ಮತದಾರನು ಇತರರ ನೆರವಿಲ್ಲದೆ ಮತ ಚಲಾಯಿಸಲು ಅಸಮರ್ಥನಾಗಿದ್ದರೆ, ತನ್ನ ಜೊತೆಯಲ್ಲಿ, ತನ್ನ ಇಚ್ಛೆಗನುಸಾರವಾಗಿ ಮತ ದಾಖಲು ಮಾಡುವ ಸಲುವಾಗಿ ನಿಯಮ 98ರಲ್ಲಿ ನಿರ್ದಿಷ್ಟಪಡಿಸಿರುವಂಥವೇ ಷರತ್ತುಗಳಿಗೆ ಒಳಪಟ್ಟು ಮತ್ತು ಅದೇ ಪ್ರಕ್ರಿಯೆಯನ್ನು ಅನುಸರಿಸಿದ ಮೇಲೆ, ಒಬ್ಬ ಸಂಗಡಿಗನನ್ನು ತನ್ನ ಜೊತೆ ಕರೆದುಕೊಂಡು ಹೋಗಲು ಪ್ರಿಸೈಡಿಂಗ್ ಆಫೀಸರ್‌ರವರು ಆತನಿಗೆ ಅನುಮತಿಸತಕ್ಕದ್ದು.

**101. ಮತದಾನದ ಅವಧಿಯಲ್ಲಿ ವೋಟಿಂಗ್ ಕಂಪಾರ್ಟ್‌ಮೆಂಟ್‌ನೊಳಗೆ ಪ್ರಿಸೈಡಿಂಗ್ ಆಫೀಸರ್ ಅವರ ಪ್ರವೇಶ.–**(1) ಪ್ರಿಸೈಡಿಂಗ್ ಆಫೀಸರ್ ಅವರು ಮತದಾನದ ಅವಧಿಯಲ್ಲಿ ವೋಟಿಂಗ್ ಕಂಪಾರ್ಟ್‌ಮೆಂಟ್‌ನೊಳಗೆ ಪ್ರವೇಶಿಸುವುದು ಅಗತ್ಯವೆಂದು ಪರಿಗಣಿಸಿದಾಗಲೆಲ್ಲಾ, ಹಾಗೆ ಪ್ರವೇಶಿಸಬಹುದು ಮತ್ತು ಬ್ಯಾಲೆಟಿಂಗ್ ಯೂನಿಟ್ಟನ್ನು ಕೆಡಿಸಲಾಗುತ್ತಿಲ್ಲ ಅಥವಾ ಅದರಲ್ಲಿ ಯಾವುದೇ ರೀತಿಯಲ್ಲಿ ಹಸ್ತಕ್ಷೇಪ ಮಾಡುತ್ತಿಲ್ಲವೆಂಬುದನ್ನು ಖಚಿತಪಡಿಸಿಕೊಳ್ಳಲು ಅವಶ್ಯವಿರುವಂಥ ಕ್ರಮಗಳನ್ನು ಕೈಗೊಳ್ಳಬಹುದು.

(2) ಪ್ರಿಸೈಡಿಂಗ್ ಆಫೀಸರ್‌ರವರು ವೋಟಿಂಗ್ ಕಂಪಾರ್ಟ್‌ಮೆಂಟ್‌ನೊಳಗೆ ಹೋಗಿರುವ ಒಬ್ಬ ಮತದಾರನು ಬ್ಯಾಲೆಟಿಂಗ್ ಯೂನಿಟನ್ನು ಕೆಡಿಸುತ್ತಿದ್ದಾನೆ ಅಥವಾ ಅದರ ವಿಷಯದಲ್ಲಿ ಅನ್ಯಥಾ ಹಸ್ತಕ್ಷೇಪ ಮಾಡುತ್ತಿದ್ದಾನೆಂದು ಅಥವಾ ಅನುಚಿತವಾಗಿ ದೀರ್ಘಕಾಲ ವೋಟಿಂಗ್ ಕಂಪಾರ್ಟ್‌ಮೆಂಟ್‌ನಲ್ಲಿದ್ದಾನೆಂದು ಸಂಶಯ ಪಡಲು ಕಾರಣವಿದ್ದರೆ, ಅವರು ವೋಟಿಂಗ್ ಕಂಪಾರ್ಟ್‌ಮೆಂಟ್‌ನೊಳಕ್ಕೆ ಪ್ರವೇಶಿಸತಕ್ಕದ್ದು ಮತ್ತು ಮತದಾನವು ಸುಗಮವಾಗಿ ಹಾಗೂ ಕ್ರಮಬದ್ಧವಾಗಿ ಜರುಗುವಂತೆ ನೋಡಿಕೊಳ್ಳಲು ಅವಶ್ಯವಾಗಬಹುದಾದಂಥ ಕ್ರಮಗಳನ್ನು ಕೈಗೊಳ್ಳತಕ್ಕದ್ದು.

(3) ಈ ನಿಯಮದ ಮೇರೆಗೆ ಪ್ರಿಸೈಡಿಂಗ್ ಆಫೀಸರ್‌ರವರು ವೋಟಿಂಗ್ ಕಂಪಾರ್ಟ್‌ಮೆಂಟ್‌ನೊಳಗೆ ಪ್ರವೇಶಿಸುವಾಗಲೆಲ್ಲಾ, ಅಲ್ಲಿ ಹಾಜರಿರುವ ಪೋಲಿಂಗ್ ಏಜೆಂಟರು ಅವರ ಜೊತೆಗಿರಲು ಇಚ್ಛಿಸಿದರೆ, ಹಾಗೆ ಜೊತೆಗಿರಲು ಅವರಿಗೆ ಅನುಮತಿಸತಕ್ಕದ್ದು.

**102. ಮತದಾನ ಮುಕ್ತಾಯ.–**(1) ಪ್ರಿಸೈಡಿಂಗ್ ಆಫೀಸರ್‌ರವರು, 57ನೇ ನಿಯಮದೊಂದಿಗೆ ಓದಲಾಗುವ 12ನೇ ನಿಯಮದ ಮೇರೆಗೆ ಮತಗಟ್ಟೆ ಮುಚ್ಚುವುದಕ್ಕೆ ಸಂಬಂಧಿಸಿದಂತೆ ನಿರ್ದಿಷ್ಟಪಡಿಸಿರುವ ಸಮಯಕ್ಕೆ ಸರಿಯಾಗಿ ಅದನ್ನು ಮುಚ್ಚತಕ್ಕದ್ದು ಮತ್ತು ಆ ತರುವಾಯ ಯಾವುದೇ ಮತದಾರನನ್ನು ಮತಗಟ್ಟೆಯೊಳಗೆ ಬಿಡತಕ್ಕದ್ದಲ್ಲ:

ಪರಂತು, ಮತಗಟ್ಟೆ ಮುಚ್ಚುವುದಕ್ಕೆ ಮೊದಲು ಅದರೊಳಗೆ ಹಾಜರಿರುವ ಎಲ್ಲ ಮತದಾರರಿಗೆ ತಮ್ಮ ಮತ ಚಲಾಯಿಸಲು ಅವಕಾಶ ಮಾಡಿಕೊಡತಕ್ಕದ್ದು.

(2) ಮತಗಟ್ಟೆ ಮುಚ್ಚುವುದಕ್ಕೆ ಮೊದಲು ಒಬ್ಬ ಮತದಾರನು ಅದರೊಳಗೆ ಹಾಜರಿದ್ದನೇ ಎಂಬ ಬಗ್ಗೆ ಯಾವುದೇ ಪ್ರಶ್ನೆ ಉದ್ಭವಿಸಿದರೆ, ಅದನ್ನು ಪ್ರಿಸೈಡಿಂಗ್ ಆಫೀಸರ್ ಅವರು ನಿರ್ಧರಿಸತಕ್ಕದ್ದು ಮತ್ತು ಅವರ ತೀರ್ಮಾನವೇ ಅಂತಿಮವಾದುದಾಗಿರತಕ್ಕದ್ದು.

**103. ದಾಖಲಾದ ಮತಗಳ ಲೆಕ್ಕ.–** (1) ಪ್ರಿಸೈಡಿಂಗ್ ಆಫೀಸರ್‌ರವರು ಮತದಾನ ಮುಗಿದ ಮೇಲೆ ದಾಖಲಾದ ಮತಗಳ ಒಂದು ಲೆಕ್ಕವನ್ನು ನಮೂನೆ 28–ಬಿ(ಇವಿಎಂ)ನಲ್ಲಿ ಸಿದ್ಧಪಡಿಸತಕ್ಕದ್ದು ಮತ್ತು ಅದನ್ನು 'ದಾಖಲಾದ ಮತಗಳ ಲೆಕ್ಕ' ಎಂದು ಬರೆಯಲಾದ ಒಂದು ಪ್ರತ್ಯೇಕ ಲಕೋಟೆಯೊಳಗೆ ಇಡತಕ್ಕದ್ದು.

(2) ಮತದಾನ ಮುಗಿದಾಗ ಅಲ್ಲಿ ಹಾಜರಿರುವ ಪ್ರತಿಯೊಬ್ಬ ಪೋಲಿಂಗ್ ಏಜೆಂಟನಿಗೆ ಪ್ರಿಸೈಡಿಂಗ್ ಆಫೀಸರ್‌ರವರು ನಮೂನೆ 28–ಬಿ(ಇವಿಎಂ)ನಲ್ಲಿ ಮಾಡಲಾದ ನಮೂದುಗಳ ಒಂದೊಂದು ಯಥಾಪ್ರತಿಯನ್ನು, ಅದನ್ನು ಸ್ವೀಕರಿಸಿರುವ ಬಗ್ಗೆ ಸದರಿ ಪೋಲಿಂಗ್ ಏಜೆಂಟನಿಂದ ಒಂದು ಸ್ವೀಕೃತಿ ಪಡೆದ ತರುವಾಯ ನೀಡತಕ್ಕದ್ದು ಮತ್ತು ಅದನ್ನು ಯಥಾಪ್ರತಿ ಎಂದು ದೃಢೀಕರಿಸತಕ್ಕದ್ದು.

**104. ಮತದಾನ ಮುಗಿದ ಮೇಲೆ ಮತಯಂತ್ರಗಳನ್ನು ಮೊಹರು ಮಾಡುವುದು.–** (1) ಮತದಾನ ಮುಗಿದ ಮೇಲೆ ಕಾರ್ಯಸಾಧ್ಯವಾದಷ್ಟು ಬೇಗನೆ, ಪ್ರಿಸೈಡಿಂಗ್ ಆಫೀಸರ್ ಅವರು ಮತ್ತಾವುದೇ ಮತಗಳನ್ನು ದಾಖಲು ಮಾಡಲಾಗುವುದಿಲ್ಲವೆಂಬುದನ್ನು ಖಾತರಿಪಡಿಸಿಕೊಳ್ಳಲು ಕಂಟ್ರೋಲ್ ಯೂನಿಟ್ಟನ್ನು ಮುಚ್ಚತಕ್ಕದ್ದು ಮತ್ತು ಬ್ಯಾಲೆಟಿಂಗ್ ಯೂನಿಟನ್ನು ಕಂಟ್ರೋಲ್ ಯೂನಿಟ್‌ನಿಂದ ಬೇರ್ಪಡಿಸತಕ್ಕದ್ದು.

(2) ಆ ತರುವಾಯ ಕಂಟ್ರೋಲ್ ಯೂನಿಟ್ಟನ್ನು ಮತ್ತು ಬ್ಯಾಲೆಟಿಂಗ್ ಯೂನಿಟ್ಟನ್ನು ಮೊಹರು ಮಾಡತಕ್ಕದ್ದು, ಮತ್ತು ರಾಜ್ಯ ಚುನಾವಣಾ ಆಯೋಗವು ನಿರ್ದೇಶಿಸಬಹುದಾದಂಥ ರೀತಿಯಲ್ಲಿ ಪ್ರತ್ಯೇಕವಾಗಿ ಭದ್ರಪಡಿಸತಕ್ಕದ್ದು ಮತ್ತು ಅವುಗಳನ್ನು ಭದ್ರಗೊಳಿಸಲು ಉಪಯೋಗಿಸಿದ ಮೊಹರನ್ನು, ಮೊಹರುಗಳನ್ನು ಒಡೆಯದೆಯೇ ಯೂನಿಟ್‌ಗಳನ್ನು ತೆರೆಯಲು ಸಾಧ್ಯವಿಲ್ಲವೆನ್ನುವ ರೀತಿಯಲ್ಲಿ ಹಾಕಿರತಕ್ಕದ್ದು.

(3) ಮತಗಟ್ಟೆಯಲ್ಲಿ ಹಾಜರಿರುವ ಪೋಲಿಂಗ್ ಏಜೆಂಟರು ತಮ್ಮ ಮೊಹರುಗಳನ್ನು ಹಾಕಲು ಇಚ್ಛಿಸಿದಲ್ಲಿ, ಹಾಗೆ ತಮ್ಮ ಮೊಹರು ಹಾಕಲು ಅವರಿಗೆ ಅನುಮತಿಸತಕ್ಕದ್ದು.

**105. ಇತರೆ ಪ್ಯಾಕೆಟ್‌ಗಳ ಮೊಹರು.–** (1) ಆ ತರುವಾಯ ಪ್ರಿಸೈಡಿಂಗ್ ಆಫೀಸರ್‌ರವರು,–

(ಎ) ಗುರುತು ಮಾಡಿದ ಮತದಾರರ ಪಟ್ಟಿಯ ಪ್ರತಿಯನ್ನು;

(ಬಿ) ನಮೂನೆ 38ರಲ್ಲಿನ ಮತದಾರರ ರಿಜಿಸ್ಟರ್‌ಅನ್ನು;

(ಸಿ) ಟೆಂಡರ್ಡ್ ಮತಪತ್ರಗಳನ್ನು ಒಳಗೊಂಡಿರುವ ಲಕೋಟೆಯನ್ನು ಮತ್ತು ನಮೂನೆ 27–ಎ(ಇವಿಎಂ) ಪಟ್ಟಿಯನ್ನು .

(ಡಿ) ಆಕ್ಷೇಪಿತ ಮತಗಳ ಪಟ್ಟಿಯನ್ನು; ಮತ್ತು

(ಇ) ಮೊಹರು ಮಾಡಿದ ಪ್ಯಾಕೆಟ್‌ನಲ್ಲಿ ಇಡುವಂತೆ ರಾಜ್ಯ ಚುನಾವಣಾ ಆಯೋಗವು ನಿರ್ದೇಶಿಸಿದಂಥ ಇತರ ಯಾವುದೇ ಪತ್ರಗಳನ್ನು

– ಪ್ರತ್ಯೇಕ ಪ್ಯಾಕೆಟ್‌ನಲ್ಲಿ ಇಡತಕ್ಕದ್ದು.

(2) ಪ್ರತಿಯೊಂದು ಪ್ಯಾಕೆಟ್‌ಅನ್ನು ಪ್ರಿಸೈಡಿಂಗ್ ಆಫೀಸರ್ ಅವರ ಮೊಹರು ಹಾಕಿ ಮತ್ತು ಮತಗಟ್ಟೆಯಲ್ಲಿ ಹಾಜರಿರುವ ಹಾಗೂ ಅದರ ಮೇಲೆ ಮೊಹರು ಹಾಕಲು ಇಚ್ಛಿಸುವ ಉಮೇದುವಾರನ ಅಥವಾ ಆತನ ಚುನಾವಣಾ ಏಜೆಂಟನ ಅಥವಾ ಆತನ ಪೋಲಿಂಗ್ ಏಜೆಂಟನ ಮೊಹರು ಹಾಕಿ ಮೊಹರು ಮಾಡತಕ್ಕದ್ದು.

**106. ಮತಯಂತ್ರಗಳು, ಇತ್ಯಾದಿಗಳನ್ನು ರಿಟರ್ನಿಂಗ್ ಆಫೀಸರ್‌ರವರಿಗೆ ರವಾನಿಸುವುದು.–** (1) ಆನಂತರ, ಪ್ರಿಸೈಡಿಂಗ್ ಆಫೀಸರ್ ಅವರು,–

(ಎ) ಮತಯಂತ್ರ;

(ಬಿ) ನಮೂನೆ 28–ಬಿ(ಇವಿಎಂ)ನಲ್ಲಿ ದಾಖಲು ಮಾಡಿದ ಮತಗಳ ಲೆಕ್ಕ;

(ಸಿ) 105ನೇ ನಿಯಮದಲ್ಲಿ ಉಲ್ಲೇಖಿಸಲಾದ ಮೊಹರು ಮಾಡಿದ ಪ್ಯಾಕೆಟ್‌ಗಳು; ಮತ್ತು

(ಡಿ) ಮತದಾನದಲ್ಲಿ ಬಳಸಿದ ಇತರ ಎಲ್ಲ ಕಾಗದಪತ್ರಗಳನ್ನು

– ರಿಟರ್ನಿಂಗ್ ಆಫೀಸರ್‌ರವರು ನಿರ್ದೇಶಿಸಬಹುದಾದಂಥ ಸ್ಥಳದಲ್ಲಿ ರಿಟರ್ನಿಂಗ್ ಆಫೀಸರ್‌ರವರಿಗೆ ಒಪ್ಪಿಸತಕ್ಕದ್ದು ಅಥವಾ ಒಪ್ಪಿಸುವಂತೆ ಮಾಡತಕ್ಕದ್ದು.

(2) ರಿಟರ್ನಿಂಗ್ ಆಫೀಸರ್‌ರವರು, ಮತ ಎಣಿಕೆ ಪ್ರಾರಂಭವಾಗುವವರೆಗೆ ಮತಯಂತ್ರ, ಪ್ಯಾಕೆಟ್‌ಗಳು ಮತ್ತು ಇತರ ಕಾಗದಪತ್ರಗಳ ಸುರಕ್ಷಿತ ಅಭಿರಕ್ಷೆಗೆ, ಅವುಗಳ ಸುರಕ್ಷಿತ ರವಾನೆಗೆ ಸಾಕಷ್ಟು ವ್ಯವಸ್ಥೆಗಳನ್ನು ಮಾಡತಕ್ಕದ್ದು.

**107. ಮುಂದೂಡಿದ ಮತದಾನದ ಬಗ್ಗೆ ಪ್ರಕ್ರಿಯೆ.–** (1) 30ನೇ ನಿಯಮದ ಅಡಿಯಲ್ಲಿ ಯಾವುದೇ ಮತಗಟ್ಟೆಯಲ್ಲಿ ಮತದಾನ ಮುಂದೂಡಲ್ಪಟ್ಟಿದ್ದರೆ, 103 ರಿಂದ 106ರವರೆಗಿನ ನಿಯಮಗಳ ಉಪಬಂಧಗಳು, ಕಾರ್ಯಸಾಧ್ಯವಾದಷ್ಟುಮಟ್ಟಿಗೆ, ಮತದಾನವನ್ನು 57ನೇ ನಿಯಮದ ಅಡಿಯಲ್ಲಿ ಮುಕ್ತಾಯಗೊಳಿಸಲು ನಿಗದಿಪಡಿಸಿದ ಸಮಯದಲ್ಲಿ ಮುಕ್ತಾಯಗೊಳಿಸಿದ್ದರೆ ಹೇಗೋ ಹಾಗೆ ಅನ್ವಯವಾಗತಕ್ಕದ್ದು.

(2) 31ನೇ ಪ್ರಕರಣದ ಅಡಿಯಲ್ಲಿ ಮತದಾನದ ಮುಂದೂಡಿಕೆಗೆ ಶಿಫಾರಸು ಮಾಡಿರುವಾಗ, ಹಾಗೆ ಮುಂದೂಡಲಾದ ಮತದಾನದಲ್ಲಿ ಈಗಾಗಲೇ ಮತ ಚಲಾಯಿಸಿರುವ ಮತದಾರರಿಗೆ ಪುನಃ ಮತ ಚಲಾಯಿಸಲು ಅವಕಾಶ ನೀಡತಕ್ಕದ್ದಲ್ಲ.

(3) ರಿಟರ್ನಿಂಗ್ ಆಫೀಸರ್‌ರವರು ಅಂಥ ಮುಂದೂಡಿಕೆಯ ಮತದಾನ ನಡೆಯುತ್ತಿರುವ ಮತಗಟ್ಟೆಯ ಪ್ರಿಸೈಡಿಂಗ್ ಆಫೀಸರ್ ಅವರಿಗೆ ಗುರುತು ಮಾಡಿರುವ ಮತದಾರರ ಪಟ್ಟಿಯ ಪ್ರತಿಯನ್ನು, ನಮೂನೆ 38ರಲ್ಲಿನ ಮತದಾರರ ರಿಜಿಸ್ಟರನ್ನು ಒಳಗೊಂಡಿರುವ ಮೊಹರು ಮಾಡಿದ ಪ್ಯಾಕೆಟನ್ನು ಮತ್ತು ಒಂದು ಹೊಸ ಮತಯಂತ್ರವನ್ನು ಒದಗಿಸತಕ್ಕದ್ದು.

(4) ಪ್ರಿಸೈಡಿಂಗ್ ಆಫೀಸರ್‌ರವರು ಮೊಹರು ಮಾಡಿರುವ ಪ್ಯಾಕೆಟ್‌ಅನ್ನು ಅಲ್ಲಿ ಹಾಜರಿರುವ ಪೋಲಿಂಗ್ ಏಜೆಂಟರ ಎದುರಿನಲ್ಲಿ ತೆರೆಯತಕ್ಕದ್ದು ಮತ್ತು ಮುಂದೂಡಿದ ಮತದಾನದಲ್ಲಿ ಮತಹಾಕಲು ಅನುಮತಿಸಲಾದ ಮತದಾರರ ಹೆಸರುಗಳನ್ನು ಗುರುತು ಮಾಡಿಕೊಳ್ಳಲು ಗುರುತು ಮಾಡಿದ ಮತದಾರರ ಪಟ್ಟಿಯ ಪ್ರತಿಯನ್ನು ಬಳಸತಕ್ಕದ್ದು.

(5) ನಿಯಮ 2 ಮತ್ತು 85ರಿಂದ 106ರವರೆಗಿನ ನಿಯಮಗಳ ಉಪಬಂಧಗಳು, ಮುಂದೂಡಿದ ಮತದಾನಕ್ಕೆ ಸಂಬಂಧಿಸಿದಂತೆ ಅದನ್ನು ಹಾಗೆ ಮುಂದೂಡುವುದಕ್ಕೆ ಮೊದಲು ಮತದಾನ ನಡೆಸುವುದಕ್ಕೆ ಅನ್ವಯವಾಗತಕ್ಕದ್ದು.

**108. ಮತಗಟ್ಟೆಯನ್ನು ವಶಪಡಿಸಿಕೊಳ್ಳುವ ಸಂದರ್ಭದಲ್ಲಿ ಮತಯಂತ್ರ ಮುಚ್ಚುವುದು.–** ಒಂದು ಮತಗಟ್ಟೆಯಲ್ಲಿ ಅಥವಾ ಮತದಾನಕ್ಕೆ ಗೊತ್ತುಪಡಿಸಿರುವ ಸ್ಥಳದಲ್ಲಿ ಮತಗಟ್ಟೆ ವಶಪಡಿಸಿಕೊಳ್ಳಲಾಗುತ್ತಿದೆಯೆಂದು ಪ್ರಿಸೈಡಿಂಗ್ ಆಫೀಸರ್ ಅವರು ಅಭಿಪ್ರಾಯಪಟ್ಟರೆ, ಅವರು ತಕ್ಷಣವೇ, ಮತ್ತಾವುದೇ ಮತವನ್ನು ಚಲಾಯಿಸಲು ಸಾಧ್ಯವಾಗದಂತೆ ಮತಯಂತ್ರದ ಕಂಟ್ರೋಲ್ ಯೂನಿಟನ್ನು ಮುಚ್ಚತಕ್ಕದ್ದು ಮತ್ತು ಬ್ಯಾಲೆಟಿಂಗ್ ಯೂನಿಟನ್ನು ಕಂಟ್ರೋಲ್ ಯೂನಿಟ್‌ನಿಂದ ಬೇರ್ಪಡಿಸತಕ್ಕದ್ದು.

**109. ವಿದ್ಯುನ್ಮಾನ ಮತಯಂತ್ರಗಳನ್ನು ಬಳಸಿರುವ ಕಡೆಗಳಲ್ಲಿ ಮತಗಳ ಎಣಿಕೆ.–** ವಿದ್ಯುನ್ಮಾನ ಮತಯಂತ್ರವನ್ನು ಉಪಯೋಗಿಸಿರುವ ಮತಗಟ್ಟೆಯಲ್ಲಿ ಚಲಾಯಿಸಲಾದ ಮತಗಳ ಎಣಿಕೆಗೆ ಸಂಬಂಧಿಸಿದಂತೆ, ನಿಯಮ–2, 63ರಿಂದ 66ರವರೆಗಿನ ನಿಯಮಗಳ ಉಪಬಂಧಗಳು ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು,

**110. ಮತಯಂತ್ರಗಳ ಪರಿಶೀಲನೆ ಮತ್ತು ಪರಿವೀಕ್ಷಣೆ:–** (1) ರಿಟರ್ನಿಂಗ್ ಆಫೀಸರ್‌ರವರು ಒಂದಕ್ಕಿಂತ ಹೆಚ್ಚು ಮತಗಟ್ಟೆಗಳಲ್ಲಿ ಬಳಸಲಾದ ಮತಯಂತ್ರಗಳ ಕಂಟ್ರೋಲ್ ಯೂನಿಟ್‌ಗಳನ್ನು ಪರಿಶೀಲನೆಗಾಗಿ ಮತ್ತು ಪರಿವೀಕ್ಷಣೆಗಾಗಿ ತೆಗೆದುಕೊಳ್ಳಬಹುದು ಮತ್ತು ಅಂಥ ಯೂನಿಟ್‌ಗಳಲ್ಲಿ ದಾಖಲಾದ ಮತಗಳನ್ನು ಏಕಕಾಲದಲ್ಲಿ ಎಣಿಕೆ ಮಾಡಬಹುದು.

(2) ಮತಯಂತ್ರದ ಯಾವುದೇ ಕಂಟ್ರೋಲ್ ಯೂನಿಟ್‌ನಲ್ಲಿ ದಾಖಲು ಮಾಡಲಾದ ಮತಗಳನ್ನು (1)ನೇ ಉಪನಿಯಮದ ಅಡಿಯಲ್ಲಿ ಎಣಿಕೆ ಮಾಡುವುದಕ್ಕೆ ಮುಂಚೆ, ಎಣಿಕೆ ಮೇಜಿನ ಬಳಿ ಹಾಜರಿರುವ ಉಮೇದುವಾರನಿಗೆ ಅಥವಾ ಆತನ ಚುನಾವಣಾ ಏಜೆಂಟ್‌ನಿಗೆ ಅಥವಾ ಆತನ ಎಣಿಕೆ ಏಜಂಟನಿಗೆ ಪೇಪರ್ ಸೀಲನ್ನು ಮತ್ತು ಯೂನಿಟ್‌ನ ಮೇಲೆ ಹಾಕಿರಬಹುದಾದಂಥ ಇತರ ಮುಖ್ಯ ಮೊಹರುಗಳನ್ನು ಪರೀಕ್ಷಿಸಲು ಮತ್ತು ಮೊಹರುಗಳು ಯಥಾಸ್ಥಿತಿಯಲ್ಲಿವೆ ಎಂಬುದನ್ನು ಸ್ವತಃ ಮನದಟ್ಟು ಮಾಡಿಕೊಳ್ಳಲು ಅವಕಾಶ ನೀಡತಕ್ಕದ್ದು.

(3) ರಿಟರ್ನಿಂಗ್ ಆಫೀಸರ್ ಅವರು ಯಾವುದೇ ಮತಯಂತ್ರದ ವಿಷಯದಲ್ಲಿ ಹಸ್ತಕ್ಷೇಪ ನಡೆದಿಲ್ಲ ಎಂಬುದನ್ನು ಸ್ವತಃ ಮನದಟ್ಟು ಮಾಡಿಕೊಳ್ಳತಕ್ಕದ್ದು.

(4) ವಾಸ್ತವವಾಗಿ ಯಾವುದೇ ಮತಯಂತ್ರದ ವಿಷಯದಲ್ಲಿ ಹಸ್ತಕ್ಷೇಪ ನಡೆದಿದೆ ಎಂದು ರಿಟರ್ನಿಂಗ್ ಆಫೀಸರ್ ಅವರಿಗೆ ಮನದಟ್ಟಾದರೆ, ಅವರು ಆ ಯಂತ್ರದಲ್ಲಿ ದಾಖಲಾಗಿರುವ ಮತಗಳನ್ನು ಎಣಿಕೆ ಮಾಡತಕ್ಕದ್ದಲ್ಲ ಮತ್ತು ಆ ಯಂತ್ರಗಳನ್ನು ಬಳಸಲಾದ ಮತಗಟ್ಟೆಯ ಅಥವಾ ಮತಗಟ್ಟೆಗಳ ಸಂಬಂಧದಲ್ಲಿ ಅನ್ವಯವಾಗಬಹುದಾದ 32ನೇ ನಿಯಮದಲ್ಲಿ ಅಥವಾ 33ನೇ ನಿಯಮದಲ್ಲಿ ಹೇಳಲಾಗಿರುವ ಪ್ರಕ್ರಿಯೆಯನ್ನು ಅನುಸರಿಸತಕ್ಕದ್ದು.

**111. ಮತಗಳ ಎಣಿಕೆ.–** (1) ರಿಟರ್ನಿಂಗ್ ಆಫೀಸರ್ ಅವರು, ಮತಯಂತ್ರವನ್ನು ವಾಸ್ತವವಾಗಿ ಕೆಡಿಸಿಲ್ಲ ಎಂದು ಮನದಟ್ಟು ಮಾಡಿಕೊಂಡ ಮೇಲೆ, ಅವರು ಅದರಲ್ಲಿ ದಾಖಲು ಮಾಡಲಾಗಿರುವ ಮತಗಳನ್ನು, ಕಂಟ್ರೋಲ್ ಯೂನಿಟ್‌ನಲ್ಲಿ ಒದಗಿಸಲಾಗಿರುವ 'ರಿಸಲ್ಟ್' ಎಂದು ಗುರುತು ಮಾಡಿರುವ ಸಂಬಂಧಪಟ್ಟ ಬಟನ್ನನ್ನು ಒತ್ತುವ ಮೂಲಕ ಎಣಿಸುವಂತೆ ಮಾಡತಕ್ಕದ್ದು. ತನ್ಮೂಲಕ ಚಲಾಯಿಸಿರುವ ಒಟ್ಟು ಮತಗಳನ್ನು ಮತ್ತು ಪ್ರತಿಯೊಬ್ಬ ಉಮೇದುವಾರರು ಪಡೆದಿರುವ ಮತಗಳನ್ನು, ಮತಗಳನ್ನು ಪ್ರದರ್ಶಿಸಲು ಯೂನಿಟ್‌ನಲ್ಲಿ ಒದಗಿಸಿರುವ ಪ್ರದರ್ಶನ ಪ್ಯಾನೆಲ್ ಮೇಲೆ, ಅಂಥ ಪ್ರತಿಯೊಬ್ಬ ಉಮೇದುವಾರರ ಸಂಬಂಧದಲ್ಲಿ ಪ್ರದರ್ಶಿಸತಕ್ಕದ್ದು.

(2) ಕಂಟ್ರೋಲ್ ಯೂನಿಟಿನ ಮೇಲೆ ಪ್ರತಿಯೊಬ್ಬ ಉಮೇದುವಾರರು ಗಳಿಸಿರುವ ಮತಗಳನ್ನು ಪ್ರದರ್ಶಿಸುತ್ತಿದ್ದಂತೆಯೇ, ರಿಟರ್ನಿಂಗ್ ಆಫೀಸರ್ ಅವರು,–

(ಎ) ಪ್ರತಿಯೊಬ್ಬ ಉಮೇದುವಾರರ ಸಂಬಂಧದಲ್ಲಿ, ದಾಖಲಾಗಿರುವಂಥ ಮತಗಳ ಸಂಖ್ಯೆಯನ್ನು ನಮೂನೆ 28–ಬಿ(ಇವಿಎಂ)ನ ಭಾಗ II ರಲ್ಲಿ ಪ್ರತ್ಯೇಕವಾಗಿ ದಾಖಲು ಮಾಡುವಂತೆ;

(ಬಿ) ಇತರ ರೀತಿಗಳಲ್ಲಿ ನಮೂನೆ 28–ಬಿ(ಇವಿಎಂ) ನ ಭಾಗ IIನ್ನು ಪೂರ್ಣಗೊಳಿಸುವಂತೆ ಮತ್ತು ಎಣಿಕೆ ಮೇಲ್ವಿಚಾರಕರು ಹಾಗೂ ಹಾಜರಿರುವ ಉಮೇದುವಾರರು ಅಥವಾ ಅವರ ಚುನಾವಣಾ ಏಜೆಂಟರು ಅಥವಾ ಅವರ ಎಣಿಕೆ ಏಜೆಂಟರು ಸಹಿ ಹಾಕುವಂತೆ; ಮತ್ತು

(ಸಿ) ನಮೂನೆ 31–ಎ(ಇವಿಎಂ) ರಲ್ಲಿನ ಫಲಿತಾಂಶ ಹಾಳೆಯಲ್ಲಿ ಸಂವಾದಿ ನಮೂದುಗಳನ್ನು ಮಾಡುವಂತೆ ಮತ್ತು ಹಾಗೆ ಫಲಿತಾಂಶದ ಹಾಳೆಯಲ್ಲಿ ನಮೂದಿಸಿದ ವಿವರಗಳನ್ನು ಪ್ರಕಟಿಸುವಂತೆ

– ಮಾಡತಕ್ಕದ್ದು.

**112. ಮತಯಂತ್ರಗಳನ್ನು ಮೊಹರು ಮಾಡುವುದು.–** (1) ಕಂಟ್ರೋಲ್ ಯೂನಿಟ್‌ನಲ್ಲಿ ದಾಖಲಾದ ಮತದಾನದ ಫಲಿತಾಂಶವನ್ನು ಪ್ರತಿಯೊಬ್ಬ ಉಮೇದುವಾರನಿಗೆ ಸಂಬಂಧಪಟ್ಟಂತೆ ಖಾತರಿಪಡಿಸಿಕೊಂಡ ಮೇಲೆ ಮತ್ತು ನಮೂನೆ 28–ಬಿ(ಇವಿಎಂ)ನ ಭಾಗ IIರಲ್ಲಿ ಮತ್ತು 67 (11), 69(7) ಮತ್ತು 71(1),(5),(6)ನೇ ನಿಯಮದ ಮೇರೆಗೆ ನಮೂನೆ 31–ಎ(ಇವಿಎಂ)ನಲ್ಲಿ ನಮೂದಿಸಿದ ಮೇಲೆ, ರಿಟರ್ನಿಂಗ್ ಆಫೀಸರ್‌ರವರು ಆ ಯೂನಿಟನ್ನು ತಮ್ಮ ಮೊಹರಿನಿಂದ ಮತ್ತು ಉಮೇದುವಾರರ ಅಥವಾ ಅಲ್ಲಿ ಹಾಜರಿದ್ದು ತಮ್ಮ ಮೊಹರುಗಳನ್ನು ಹಾಕಲು ಇಚ್ಛಿಸುವ ಅವರ ಚುನಾವಣಾ ಏಜೆಂಟರ ಮೊಹರಿನಿಂದ, ಯೂನಿಟಿನಲ್ಲಿ ದಾಖಲಾಗಿರುವ ಮತದಾನದ ಫಲಿತಾಂಶವನ್ನು ಅಳಿಸಲಾಗದಂತೆ ಮಾಡಲು ಮತ್ತು ಯೂನಿಟ್ ಅಂಥ ಫಲಿತಾಂಶವನ್ನು ನೆನಪಿನಲ್ಲಿ ಇಟ್ಟುಕೊಳ್ಳುವಂತೆ ಮಾಡುವ ಸಲುವಾಗಿ ಯೂನಿಟ್‌ನ್ನು ಮರು ಮೊಹರು ಮಾಡತಕ್ಕದ್ದು.

(2) ಹಾಗೆ ಮೊಹರು ಮಾಡಿದ ಕಂಟ್ರೋಲ್ ಯೂನಿಟನ್ನು ವಿಶೇಷವಾಗಿ ಸಿದ್ಧಪಡಿಸಿದ ಪೆಟ್ಟಿಗೆಗಳಲ್ಲಿ ಇಡತಕ್ಕದ್ದು. ಅದರ ಮೇಲೆ ರಿಟರ್ನಿಂಗ್ ಆಫೀಸರ್ ಅವರು ಈ ಮುಂದಿನ ವಿವರಗಳನ್ನು ದಾಖಲು ಮಾಡತಕ್ಕದ್ದು, ಎಂದರೆ:–

(ಎ) ವಾರ್ಡ್‌ನ ಹೆಸರು;

(ಬಿ) ಕಂಟ್ರೋಲ್ ಯೂನಿಟ್ಟನ್ನು ಬಳಸಿದ ಮತಗಟ್ಟೆಯ ಅಥವಾ ಮತಗಟ್ಟೆಗಳ ವಿವರಗಳು;

(ಸಿ) ಕಂಟ್ರೋಲ್ ಯೂನಿಟ್‌ನ ಕ್ರಮ ಸಂಖ್ಯೆ;

(ಡಿ) ಮತದಾನದ ದಿನಾಂಕ; ಮತ್ತು

(ಇ) ಮತ ಎಣಿಕೆಯ ದಿನಾಂಕ.

(3) 70 ರಿಂದ 72ರ ವರೆಗಿನ ನಿಯಮಗಳ ಉಪಬಂಧಗಳು, ಸಾಧ್ಯವಾದಷ್ಟು ಮಟ್ಟಿಗೆ, ಮತಯಂತ್ರಗಳಿಂದ ಮಾಡಿದ ಮತದಾನದ ಸಂಬಂಧದಲ್ಲಿ ಅನ್ವಯವಾಗತಕ್ಕದ್ದು ಮತ್ತು ಆ ನಿಯಮಗಳಲ್ಲಿ,–

(ಎ) ಮತಪತ್ರಕ್ಕೆ ಮಾಡಲಾದ ಯಾವುದೇ ಉಲ್ಲೇಖವು ಅಂಥ ಮತಯಂತ್ರಕ್ಕೆ ಮಾಡಲಾದ ಉಲ್ಲೇಖವನ್ನು ಒಳಗೊಂಡಿರುವುದಾಗಿ ಅರ್ಥೈಸತಕ್ಕದ್ದು.

(ಬಿ) ಯಾವುದೇ ನಿಯಮಕ್ಕೆ ಮಾಡಲಾದ ಯಾವುದೇ ಉಲ್ಲೇಖವು ಅಧ್ಯಾಯ IIರಲ್ಲಿನ ಸಂವಾದಿ ನಿಯಮಕ್ಕೆ, ಅಥವಾ ಸಂದರ್ಭಾನುಸಾರ ನಿಯಮ 110ಕ್ಕೆ ಅಥವಾ 111ಕ್ಕೆ ಮಾಡಲಾದ ಉಲ್ಲೇಖವೆಂಬಂತೆ ಅರ್ಥೈಸತಕ್ಕದ್ದು.

**113. ಮತಯಂತ್ರಗಳ ಮತ್ತು ಚುನಾವಣೆಗೆ ಸಂಬಂಧಪಟ್ಟ ಕಾಗದ ಪತ್ರಗಳ ಅಭಿರಕ್ಷೆ.–** (1) ಚುನಾವಣೆಯಲ್ಲಿ ಬಳಸಲಾದ ಎಲ್ಲ ಮತಯಂತ್ರಗಳನ್ನು ಆಯುಕ್ತರು, ರಾಜ್ಯ ಚುನಾವಣಾ ಆಯೋಗ, ಕರ್ನಾಟಕ, ಇವರು ನಿರ್ದೇಶಿಸಬಹುದಾದಂಥ ಅಭಿರಕ್ಷೆಯಲ್ಲಿಡತಕ್ಕದ್ದು.

(1ಎ) ಒಂದು ಚುನಾವಣೆಯಲ್ಲಿ ಬಳಸಲಾದ ಎಲ್ಲ ಮತಯಂತ್ರಗಳನ್ನು ಸಂಬಂಧಪಟ್ಟ ಜಿಲ್ಲಾ ಚುನಾವಣಾಧಿಕಾರಿಯವರ ಅಭಿರಕ್ಷೆಯಲ್ಲಿಡತಕ್ಕದ್ದು.

(2) ಜಿಲ್ಲಾ ಚುನಾವಣಾಧಿಕಾರಿಯವರು, ಸಂದರ್ಭಾನುಸಾರ,–

(ಎ) ಕೌಂಟರು ಫಾಯಿಲ್‌ಗಳ ಸಮೇತ ಇರುವ ಉಪಯೋಗಿಸಿಲ್ಲದ ಅಂಚೆ ಮತಪತ್ರಗಳ ಪ್ಯಾಕೆಟ್‌ಗಳನ್ನು;

(ಬಿ) ಸಿಂಧುವಾಗಿರುವ ಟೆಂಡರ್ಡ್ ಅಥವಾ ತಿರಸ್ಕೃತವಾಗಿರುವ ಬಳಸಿದ ಅಂಚೆ ಮತಪತ್ರಗಳ ಪ್ಯಾಕೆಟ್‌ಗಳನ್ನು;

(ಸಿ) ಬಳಸಿದ ಅಂಚೆ ಮತಪತ್ರಗಳ ಕೌಂಟರ್ ಫಾಯಿಲ್‌ಗಳ ಪ್ಯಾಕೆಟ್‌ಗಳನ್ನು;

(ಡಿ) ಗುರುತು ಮಾಡಿದ ಮತದಾರರ ಪಟ್ಟಿಯ ಪ್ರತಿಯ ಪ್ಯಾಕೆಟ್‌ಗಳನ್ನು, ಅಥವಾ

(ಇ) ಮತದಾರರ ಚೀಟಿಯೂ ಸೇರಿದಂತೆ, ನಮೂನೆ 38ರಲ್ಲಿ ಮತದಾರರ ರಿಜಿಸ್ಟರನ್ನು ಒಳಗೊಂಡಿರುವ ಪ್ಯಾಕೆಟ್‌ಗಳನ್ನು;

(ಎಫ್) ಮತದಾರರ ಘೋಷಣೆಗಳು ಮತ್ತು ಅವರ ಸಹಿಗಳ ದೃಢೀಕರಣವನ್ನು ಒಳಗೊಂಡಿರುವ ಪ್ಯಾಕೆಟ್‌ಗಳನ್ನು

– ಸುರಕ್ಷಿತ ಅಭಿರಕ್ಷೆಯಲ್ಲಿಡತಕ್ಕದ್ದು.

**114. ಕೇಂದ್ರ ನಿಯಮಗಳು, ಶಾಸನಬದ್ಧ ಆದೇಶಗಳು, ಮುಂತಾದವುಗಳ ಅನ್ವಯ.–** ಮೇಲೆ ಹೇಳಿದ ಉಪಬಂಧಗಳಿಗೆ ಬಾಧಕವಾಗದಂತೆ, ಈ ನಿಯಮಗಳಲ್ಲಿ ಯಾವುದೇ ನಿರ್ದಿಷ್ಟ ಉಪಬಂಧಗಳನ್ನು ಮಾಡದಿರುವೆಡೆಗಳಲ್ಲೆಲ್ಲಾ ಕಾಲಕಾಲಕ್ಕೆ ತಿದ್ದುಪಡಿಯಾದ ಜನತಾ ಪ್ರಾತಿನಿಧ್ಯ ಅಧಿನಿಯಮ, 1951ರ ಮೇರೆಗೆ ರಚಿಸಲಾದ, ಚುನಾವಣೆಗಳನ್ನು ನಡೆಸುವ ನಿಯಮಗಳು, 1961ರ ನಿಯಮಗಳ ಉಪಬಂಧಗಳು ಮತ್ತು ಭಾರತ ಚುನಾವಣಾ ಆಯೋಗವು ಹೊರಡಿಸಿದ ಸೂಚನೆಗಳು, ಶಾಸನಬದ್ಧ ಆದೇಶಗಳು ಮತ್ತು ಸ್ಪಷ್ಟೀಕರಣಗಳು ಈ ನಿಯಮಗಳ ಮೇರೆಗಿನ ಪ್ರಕರಣಗಳಿಗೆ ಯಥೋಚಿತ ಬದಲಾವಣೆಗಳೊಂದಿಗೆ ಅನ್ವಯವಾಗತಕ್ಕದ್ದು."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತಾ ಎಂ ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

3. **ಹೊಸ 27ಎ ನಮೂನೆಯ ಸೇರ್ಪಡೆ.–** ಸದರಿ ನಿಯಮಗಳ ನಮೂನೆ 27ರ ತರುವಾಯ ಈ ಮುಂದಿನ ನಮೂನೆಯನ್ನು ಸೇರಿಸತಕ್ಕದ್ದು, ಎಂದರೆ:–

**ನಮೂನೆ 27–ಎ(ಇವಿಎಂ)**

**(ನಿಯಮ 100ನ್ನು ನೋಡಿ)**

**ಚಲಾಯಿಸಿದ (ಟೆಂಡರ್ಡ್) ಮತಗಳ ಪಟ್ಟಿ**

----------------ಚುನಾವಣಾ ಕ್ಷೇತ್ರದಿಂದ ---------ಗ್ರಾಮ/ತಾಲ್ಲೂಕು/ಜಿಲ್ಲಾ ಪಂಚಾಯಿತಿಯ ಸದಸ್ಯ ಸ್ಥಾನಕ್ಕೆ ಚುನಾವಣೆ.

ಮತಗಟ್ಟೆಯ ಸಂಖ್ಯೆ ಮತ್ತು ಹೆಸರು ----------------------------------------

ಮತದಾರರ ಪಟ್ಟಿಯ ಭಾಗದ ಸಂಖ್ಯೆ ----------------------------------------

| ಕ್ರಮ ಸಂಖ್ಯೆ | ಮತದಾರನ ಹೆಸರು | ಮತದಾರರ ಪಟ್ಟಿಯಲ್ಲಿ ಮತದಾರನ ಕ್ರಮಸಂಖ್ಯೆ | ಮತದಾರನ ಹೆಸರಿನಲ್ಲಿ ಈಗಾಗಲೇ ಮತ ಚಲಾಯಿಸಿರುವಂಥ ಆ ವ್ಯಕ್ತಿಯ ಮತದಾರರ ರಿಜಿಸ್ಟರಿನಲ್ಲಿನ (ನಮೂನೆ 38) ಕ್ರಮಸಂಖ್ಯೆ | ಮತದಾರನ ಸಹಿ/ ಹೆಬ್ಬೆಟ್ಟಿನ ಗುರುತು. |
|---|---|---|---|---|
| 1. | | | | |
| 2. | | | | |
| 3. | | | | |
| 4. | | | | |
| 5. | | | | |
| 6. | | | | |
| ಇತ್ಯಾದಿ | | | | |

ದಿನಾಂಕ:

ಪ್ರಿಸೈಡಿಂಗ್ ಅಧಿಕಾರಿಯ ಸಹಿ.

**(ii)** ಸದರಿ ನಿಯಮಗಳ 28ಎ ನಮೂನೆಯ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"ನಮೂನೆ 28ಬಿ (ಇವಿಎಂ)**

**(103 ಮತ್ತು 106ನೇ ನಿಯಮ ನೋಡಿ)**

**ಭಾಗ – *I***

**ದಾಖಲಿಸಿದ ಮತಗಳ ಲೆಕ್ಕ**

---------------- ಚುನಾವಣಾ ಕ್ಷೇತ್ರದಿಂದ ---------ಗ್ರಾಮ/ತಾಲ್ಲೂಕು/ಜಿಲ್ಲಾ ಪಂಚಾಯಿತಿ ಸದಸ್ಯ ಸ್ಥಾನಕ್ಕೆ ಚುನಾವಣೆ

ಮತಗಟ್ಟೆಯ ಸಂಖ್ಯೆ ಮತ್ತು ಹೆಸರು ------------------

ಮತಗಟ್ಟೆಯಲ್ಲಿ ಬಳಸಲಾದ ಕಂಟ್ರೋಲ್ ಯೂನಿಟ್‌ನ ಗುರುತು ಸಂಖ್ಯೆ ----------------

ಮತಗಟ್ಟೆಯಲ್ಲಿ ಬಳಸಲಾದ ಬ್ಯಾಲೆಟ್ ಯೂನಿಟ್‌ನ ಗುರುತು ಸಂಖ್ಯೆ ----------------

ಮತಗಟ್ಟೆಯ ಬ್ಯಾಲೆಟಿಂಗ್ ಯೂನಿಟ್‌ನಲ್ಲಿ ಬಳಸಲಾದ ಮತಯಂತ್ರಗಳು ---------------

1. ಮತಗಟ್ಟೆಗೆ ಹಂಚಿಕೆ ಮಾಡಲಾದ ಮತದಾರರ ಒಟ್ಟು ಸಂಖ್ಯೆ
2. ಮತದಾರರ ರಿಜಿಸ್ಟರಿನಲ್ಲಿ (ನಮೂನೆ 38) ನಮೂದಿಸಲಾದಂತೆ ಮತದಾರರ ಒಟ್ಟು ಸಂಖ್ಯೆ
3. ನಿಯಮ 99ರ ಅಡಿಯಲ್ಲಿ ಮತಗಳನ್ನು ದಾಖಲಿಸದಿರಲು ತೀರ್ಮಾನಿಸಿದ ಮತದಾರರ ಸಂಖ್ಯೆ.
4. 97ನೇ ನಿಯಮದ ಅಡಿಯಲ್ಲಿ ಮತ ಚಲಾಯಿಸಲು ಅವಕಾಶ ಪಡೆಯದ ಮತದಾರರ ಸಂಖ್ಯೆ.

5. ಮತಯಂತ್ರದ ಪ್ರಕಾರ ದಾಖಲಾದ ಮತಗಳ ಒಟ್ಟು ಸಂಖ್ಯೆ ----

6. 5ನೇ ಬಾಬಿನ ಎದುರು ತೋರಿಸಿರುವ ಒಟ್ಟು ಮತಗಳ ಸಂಖ್ಯೆಯು 2ನೇ ಬಾಬಿನ ಎದುರು ಕಾಣಿಸಿರುವ ಮತದಾರರ ಒಟ್ಟು ಸಂಖ್ಯೆಯಲ್ಲಿ 3ನೇ ಬಾಬಿನ ಎದುರು ತೋರಿಸಿರುವಂಥ, ಮತಗಳನ್ನು ದಾಖಲಿಸದಿರಲು ತೀರ್ಮಾನಿಸಿದ ಮತದಾರರ ಸಂಖ್ಯೆಯನ್ನು ಕಳೆದ ನಂತರ ಬಂದ ಸಂಖ್ಯೆಯಲ್ಲಿ 4ನೇ ಬಾಬಿನ ಎದುರು ತೋರಿಸಿರುವ ಮತದಾರರ ಸಂಖ್ಯೆಯನ್ನು ಕಳೆದರೆ (2–3–4) ಬರುವ ಸಂಖ್ಯೆಗೆ ಹೋಲಿಕೆಯಾಗುತ್ತದೆಯೇ ಅಥವಾ ಏನಾದರೂ ವ್ಯತ್ಯಾಸಗಳು ಗಮನಕ್ಕೆ ಬಂದಿವೆಯೇ.

7. ನಿಯಮ 100ರ ಮೇರೆಗೆ ಟೆಂಡರ್ಡ್ ಮತಪತ್ರಗಳನ್ನು ಯಾರಿಗೆ ನೀಡಲಾಯಿತೋ ಆ ಮತದಾರರ ಸಂಖ್ಯೆ.

8. ಟೆಂಡರ್ಡ್ ಮತ ಪತ್ರಗಳ ಸಂಖ್ಯೆ:

| | | |
|---|---|---|
| (ಎ) ಬಳಕೆಗೆ ಸ್ವೀಕರಿಸಲಾದವುಗಳು | | |
| (ಬಿ) ಮತದಾರರಿಗೆ ನೀಡಲಾದವುಗಳು | | |
| (ಸಿ) ಬಳಸದೆ ಹಾಗೇ ಹಿಂದಿರುಗಿಸಿದವುಗಳು | | |

9. ಪೇಪರ್ ಸೀಲುಗಳ ಲೆಕ್ಕ

| | |
|---|---|
| 1. ಒದಗಿಸಲಾದ ಪೇಪರ್ ಸೀಲುಗಳ ಕ್ರಮಸಂಖ್ಯೆ<br>----- ರಿಂದ ------------ ವರೆಗೆ | |
| 2. ಒದಗಿಸಲಾದ ಪೇಪರ್ ಸೀಲುಗಳ ಒಟ್ಟು ಸಂಖ್ಯೆ ----- | ಪೋಲಿಂಗ್ ಏಜೆಂಟರ ಸಹಿ |
| 3. ಬಳಸಲಾದ ಪೇಪರ್ ಸೀಲುಗಳ ಸಂಖ್ಯೆ ---------- | 1 ----- |
| 4. ರಿಟರ್ನಿಂಗ್ ಆಫೀಸರ್ ಅವರಿಗೆ ಹಿಂದಿರುಗಿಸಲಾದ ಬಳಸಿರದ ಪೇಪರ್ ಸೀಲುಗಳ ಸಂಖ್ಯೆ -------- | 2 -----<br>3 ----- |
| 5. ಹಾನಿಗೊಂಡ ಪೇಪರ್ ಸೀಲ್ ಯಾವುದಾದರೂ ಇದ್ದರೆ ಅದರ ಕ್ರಮಸಂಖ್ಯೆ | 4 -----<br>5 ----- |

ದಿನಾಂಕ: ಪ್ರಿಸೈಡಿಂಗ್ ಆಫೀಸರರ ಸಹಿ

ಸ್ಥಳ: ಮತಗಟ್ಟೆ ಸಂಖ್ಯೆ ----

**ಭಾಗ *II* - ಎಣಿಕೆಯ ಫಲಿತಾಂಶ**

| ಕ್ರ.ಸಂ. | ಉಮೇದುವಾರರ ಹೆಸರು | ದಾಖಲಾದ ಮತಗಳ ಸಂಖ್ಯೆ |
|---|---|---|
| 1 | | |
| 2 | | |
| 3 | | |
| 4 | | |
| 5 | | |
| 6 | | |
| **ಒಟ್ಟು** | | |

ಮೇಲೆ ಕಾಣಿಸಿದ ಮತಗಳ ಒಟ್ಟು ಸಂಖ್ಯೆಯು ಭಾಗ I ರ 5ನೇ ಬಾಬಿನ ಎದುರು ಕಾಣಿಸಿರುವ ಮತಗಳ ಒಟ್ಟು ಸಂಖ್ಯೆಯೊಂದಿಗೆ ಹೋಲಿಕೆಯಾಗುತ್ತದೆಯೇ ಅಥವಾ ಎರಡೂ ಒಟ್ಟು ಸಂಖ್ಯೆಗಳ ನಡುವೆ ಯಾವುದೇ ವ್ಯತ್ಯಾಸ ಕಂಡುಬಂದಿದೆಯೇ.

ಸ್ಥಳ: ಎಣಿಕೆ ಮೇಲ್ವಿಚಾರಕರ ಸಹಿ

ದಿನಾಂಕ

ಉಮೇದುವಾರರ ಹೆಸರು / ಚುನಾವಣಾ ಏಜೆಂಟ್/ ಎಣಿಕೆ ಏಜೆಂಟರ ಹೆಸರು ಪೂರ್ಣ ಸಹಿ.

1.
2.
3.
4.
5.
6.
7.
8.

ಸ್ಥಳ:

ದಿನಾಂಕ ರಿಟರ್ನಿಂಗ್ ಆಫೀಸರರ ಸಹಿ.

**(iii)** ಸದರಿ ನಿಯಮಗಳ ನಮೂನೆ 31ರ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**ನಮೂನೆ 31ಎ (ಇವಿಎಂ)**

**(111ನೇ ನಿಯಮ ನೋಡಿ)**

**ಅಂತಿಮ ಫಲಿತಾಂಶದ ಹಾಳೆ**

**(ಅಧಿಸೂಚಿತ ಮತಗಟ್ಟೆಗಳನ್ನು ಹೊರತುಪಡಿಸಿ ಇತರ ಮತಗಟ್ಟೆಗಳಲ್ಲಿ ಮತದಾನದ ಫಲಿತಾಂಶವನ್ನು ದಾಖಲು ಮಾಡುವುದಕ್ಕಾಗಿ ಬಳಸಬೇಕಾದುದು)**

-------- ಚುನಾವಣಾ ಕ್ಷೇತ್ರದಿಂದ ------------ ಗ್ರಾಮ / ತಾಲೂಕು/ ಜಿಲ್ಲಾ ಪಂಚಾಯಿತಿಯ ಸದಸ್ಯ ಸ್ಥಾನಕ್ಕೆ ಚುನಾವಣೆ.

ಕ್ಷೇತ್ರದ ಹೆಸರು ------

ಕ್ಷೇತ್ರದಲ್ಲಿನ ಮತದಾರರ ಒಟ್ಟು ಸಂಖ್ಯೆ ----

| ಮತಗಟ್ಟೆಯ ಕ್ರಸಂ. | ಈ ಕೆಳಕಂಡ ಉಮೇದುವಾರರಿಗೆ ಚಲಾಯಿಸಲಾಗಿರುವ ಸಿಂಧುವಾದ ಮತಗಳ ಸಂಖ್ಯೆ | | | ಸಿಂಧುವಾಗಿರುವ ಮತಗಳ ಒಟ್ಟು ಸಂಖ್ಯೆ | ತಿರಸ್ಕೃತವಾದ ಮತಗಳ ಸಂಖ್ಯೆ | ಟೆಂಡರ್ಡ್ ಮತಗಳ ಒಟ್ಟು ಸಂಖ್ಯೆ |
|---|---|---|---|---|---|---|
| | ಎ | ಬಿ | ಸಿ | | | |
| 1<br>2<br>3<br>4 | | | | | | |
| | | | | | | |

ಮತಗಟ್ಟೆಗಳಲ್ಲಿ ದಾಖಲಾಗಿರುವ ಮತಗಳ ಒಟ್ಟು ಸಂಖ್ಯೆ

ಅಂಚೆ ಮತ ಪತ್ರಗಳ ಮೇಲೆ ದಾಖಲಾಗಿರುವ ಮತಗಳ ಸಂಖ್ಯೆ

(ಒಂದು ಕ್ಷೇತ್ರದಿಂದ ಚುನಾವಣೆ ನಡೆದ ಸಂದರ್ಭದಲ್ಲಿ ಭರ್ತಿ ಮಾಡಬೇಕಾದುದು)

ಚಲಾಯಿಸಲಾದ ಒಟ್ಟು ಮತಗಳು

ಸ್ಥಳ ---------

ದಿನಾಂಕ ------ ರಿಟರ್ನಿಂಗ್ ಆಫೀಸರರ ಸಹಿ.

**(iv)** ಸದರಿ ನಿಯಮಗಳ 37ನೇ ನಮೂನೆಯ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**ನಮೂನೆ – 38**

**(96ನೇ ನಿಯಮ ನೋಡಿ)**

**ಮತದಾರರ ರಿಜಿಸ್ಟರು**

------ ಚುನಾವಣಾ ಕ್ಷೇತ್ರದಿಂದ ---------- ಗ್ರಾಮ/ ತಾಲ್ಲೂಕು/ ಜಿಲ್ಲಾ ಪಂಚಾಯಿತಿಯ ಸದಸ್ಯ ಸ್ಥಾನಕ್ಕೆ ಚುನಾವಣೆ.

ಚುನಾವಣಾ ಕ್ಷೇತ್ರದ ಸಂಖ್ಯೆ ಮತ್ತು ಮತಗಟ್ಟೆಯ ಹೆಸರು -----------------

ಮತದಾರರ ಪಟ್ಟಿಯ ಭಾಗ ಸಂಖ್ಯೆ -----------------

| ಕ್ರಸಂ. | ಮತದಾರರ ಪಟ್ಟಿಯಲ್ಲಿರುವಂತೆ ಮತದಾರರ ಕ್ರಮ ಸಂಖ್ಯೆ | ಮತದಾರರ ಸಹಿ/ ಹೆಬ್ಬೆಟ್ಟಿನ ಗುರುತು | ಷರಾ |
|---|---|---|---|
| 1<br>2<br>3<br>4<br>ಇತ್ಯಾದಿ | | | |

ದಿನಾಂಕ: ಪ್ರಿಸೈಡಿಂಗ್ ಆಫೀಸರರ ಸಹಿ

**ಸ್ವರ್ಣಲತಾ ಎಂ ಭಂಡಾರೆ**
ಸರ್ಕಾರದ ಅಧೀನ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

